## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ
## ನಮೂನೆ - 29
## ಕರ್ನಾಟಕ ಭೂ ಕಂದಾಯ ನಿಯಮಾವಳಿ 1964 ಕಲಂ 68 (ಕರ್ನಾಟಕ ಭೂ ಕಂದಾಯ ನಿಯಮಾವಳಿ 96) ಉಪ ಕಲಂ(5)ರ ಮೇರೆಗಿನ ಘೋಷಣೆ

**ನಂ.ಎಲ್.ಎನ್.ಡಿ(ಎನ್.ಎ)ಸಿಆರ್/34/2001-2002, ಬೆಂಗಳೂರು, ದಿನಾಂಕ: 11ನೇ ಮೇ 2004**

**ವಿಷಯ:** ಅಂತರ ರಾಷ್ಟ್ರೀಯ ವಿಮಾನ ನಿಲ್ದಾಣ ಸ್ಥಾಪನೆಗಾಗಿ ವಶಪಡಿಸಿಕೊಳ್ಳಲಾಗಿರುವ ಜಮೀನುಗಳ ಮಧ್ಯೆ ಹಾದುಹೋಗಿರುವ ರಸ್ತೆಗಳನ್ನು ಖಾಯಂ ಆಗಿ ಮುಚ್ಚುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಪತ್ರದ ಸಂಖ್ಯೆ ಆರ್.ಡಿ.44ಎಲ್‌ಜಿಪಿ 2002 ದಿನಾಂಕ 1-3-2004.

ವಿಷಯಕ್ಕೆ ಸಂಬಧಿಸಿದಂತೆ ಉಲ್ಲೇಖದ ಸರ್ಕಾರದ ಪತ್ರದಲ್ಲಿ ಬೆಂಗಳೂರು ಅಂತರ ರಾಷ್ಟ್ರೀಯ ವಿಮಾನ ನಿಲ್ದಾಣ ಸ್ಥಾಪನೆಗಾಗಿ ವಶಪಡಿಸಿಕೊಳ್ಳಲಾಗಿರುವ ಜಮೀನುಗಳ ಮಧ್ಯೆ ಹಾದುಹೋಗಿರುವ ರಸ್ತೆಗಳನ್ನು ಖಾಯಂ ಆಗಿ ಮುಚ್ಚುವ ಬಗ್ಗೆ ಅಂತಿಮ ಅಧಿಸೂಚನೆಯನ್ನು ಹೊರಡಿಸಲು ಸರ್ಕಾರದಿಂದ ಪೂರ್ವಾನುಮತಿಯನ್ನು ನೀಡಲಾಗಿದೆ. ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 68, ಉಪಕಲಂ (5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಸರ್ಕಾರದ ಪತ್ರದಲ್ಲಿನ ನಿರ್ದೇಶನದ ಮೇರೆಗೆ ಚಲಾಯಿಸಿ ಈ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಬೆಂಗಳೂರು ಜಿಲ್ಲೆ, ಬೆಂಗಳೂರು ಉತ್ತರ ತಾಲ್ಲೂಕು (ಅಪರ), ಜಾಲಾ ಹೋಬಳಿಗೆ ಸೇರಿದ ಹುಣಚೂರು ಗ್ರಾಮದ ರೀಸರ್ವೆ ನಂ.88 ರಲ್ಲಿ ಮೈಲನಹಳ್ಳಿ ಗ್ರಾಮದಿಂದ ದೇವನಹಳ್ಳಿಗೆ ಹೋಗುವ ಲೋಕೋಪಯೋಗಿ (ಸುಮಾರು 12 x 1000 ಮೀಟರ್ ಉದ್ದದ) ಸಾರ್ವಜನಿಕ ರಸ್ತೆಯು ಸಾರ್ವಜನಿಕ ಉಪಯೋಗಕ್ಕೆ ಅಗತ್ಯವಿಲ್ಲವೆಂದು ವ್ಯವಹರಣೆಗಳ ದಾಖಲೆಗಳನ್ನು ಪರಿಶೀಲಿಸಿದ ತರುವಾಯ ತಿಳಿದುಬಂದಿರುತ್ತದೆ. ಈ ಸಾರ್ವಜನಿಕ ರಸ್ತೆಯ ಮೇಲಿನ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದ್ದೆಂದು ಈ ಮೂಲಕ ಘೋಷಿಸಿದೆ.

**ಅನುಸೂಚಿ**

| | | |
|---|---|---|
| ಸಾರ್ವಜನಿಕ ರಸ್ತೆ ಹೊಂದಿರುವ ಗ್ರಾಮದ ಹೆಸರು | : | ಹುಣಚೂರು ಗ್ರಾಮದ ರೀಸರ್ವೆ ನಂ.88 ರಲ್ಲಿ ಮೈಲನಹಳ್ಳಿ ಗ್ರಾಮದಿಂದ ದೇವನಹಳ್ಳಿ ಹೋಗುವ ಲೋಕೋಪಯೋಗಿ ರಸ್ತೆ |
| ತಾಲ್ಲೂಕಿನ ಹೆಸರು | : | ಬೆಂಗಳೂರು ಉತ್ತರ ತಾಲ್ಲೂಕು (ಅಪರ) |
| ಜಿಲ್ಲೆಯ ಹೆಸರು | : | ಬೆಂಗಳೂರು |
| ರಸ್ತೆಯ ಭಾಗದ ವರ್ಣನೆ | : | ಅಂತರ ರಾಷ್ಟ್ರೀಯ ವಿಮಾನ ನಿಲ್ದಾಣ ಸ್ಥಾಪನೆಗಾಗಿ ವಶಪಡಿಸಿಕೊಳ್ಳಲಾಗಿರುವ ಜಮೀನುಗಳ ಮಧ್ಯೆ ಹಾದುಹೋಗಿರುವ ಹುಣಚೂರು ಗ್ರಾಮದ ರೀ.ಸರ್ವೆ ನಂ.88 ರಲ್ಲಿ ಮೈಲನಹಳ್ಳಿ ಗ್ರಾಮದಿಂದ ದೇವನಹಳ್ಳಿಗೆ ಹೋಗುವ ಸಾರ್ವಜನಿಕ ರಸ್ತೆ ಖಾಯಂ ಆಗಿ ಮುಚ್ಚುವುದು. |
| ರಸ್ತೆಯ ಸರಿ ಸುಮಾರು ವಿಸ್ತೀರ್ಣ | : | ಸುಮಾರು 12 x 1000 ಮೀಟರ್ ಉದ್ದ |
| ಮೇರೆಗಳು | : | ಪೂರ್ವ: ರಿ.ಸರ್ವೆ ನಂ. 88 ರ ಉಳಿಕೆ<br>ಪಶ್ಚಿಮ: ರಿ.ಸರ್ವೆ ನಂ. 88 ರ ಉಳಿಕೆ ಮತ್ತು ಅರಿಶಿನ ಕುಂಟೆ ಗಡಿ<br>ಉತ್ತರ: ಗಂಗಮುತ್ತದ ಹಳ್ಳಿ ಮತ್ತು ಅರಿಶಿನ ಕುಂಟೆ ಗಡಿ<br>ದಕ್ಷಿಣ: ರಿ.ಸರ್ವೆ ನಂ. 88ರ ಉಳಿಕೆ ಮತ್ತು ಬೂದಿಗೆರೆ ರಸ್ತೆ. |

ಪಿ.ಆರ್. 855 ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

## KARNATAKA POWER TRANSMISSION CORPORATION LTD
**No. SEE/TR.(W&M) / AEE/SSD/580 Dated: 7th May 2004**

The Karnataka Power Transmission Corporation Ltd., have formulate a Scheme under 28 (A) of the Electricity Supply Act 1948 and the same is herewith published in pursuance of section 29 (ii) of the said Act for information of the licence and any other persons interested. Particulars of the Scheme are as follows:-

| | | | |
|---|---|---|---|
| 1. | Name of the Scheme | : | Construction of 110 KV tap line the existing 110KV D/C Siddapura-Sirsi line to the proposed 110/11KV sub-station at Chandragutti, Soraba Tq. |
| 2. | Salient Features | : | To overcome low voltage condition and to meet growing power demand in the around Chandragutti Village. |
| 3. | Areas passing through | : | Kunaji Village, Kastur, Kallakoppa, Vadigere, Aigode, Bastikoppa, Kongod Chandragutti. |
| 4. | Approximate cost | : | Rs.400.00 lakhs. |

The Corporation shall have and shall exercise all powers which the Telegraphs authorities possess under Part III of the Indian Telegraph Act 1985 (18 of 1985) for carrying out the above Scheme. Objections to the above Scheme if any should be sent to the Superintending Engineer, Elecl., Transmission (Works & Maintenance) Circle, KPTCL., Harnahalli Manjappa complex, Park Extension, Shimoga within Two months from the date of publication of the Notification for consideration of the Corporation.

Superintending Engineer, Elecl.,
Transmission (W&M) circle, KPTCL., Shimoga.

P.D. 42

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ, ದಾವಣಗೆರೆ

**ಪ್ರ.ಸಂ.ಕಾಅದಾ:ಕಾನಪ:ಸಿಆರ್-119/04 ದಿನಾಂಕ: 1ನೇ ಜೂನ್ 2004**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1. ಶ್ರೀಮತಿ ಶಾರದಮ್ಮ ಕೋಂ ದಿ|| ಮೌನೇಶಿ 40 ವರ್ಷ
2. ಎಂ. ದೇವಿಕಾ 16 ವರ್ಷ
3. ಎಂ. ವಿನಾಯಕ 14 ವರ್ಷ
4. ಎಂ. ಅನ್ನಪೂರ್ಣೇಶ್ವರಿ 12 ವರ್ಷ

ಆನಗೋಡು, ದಾವಣಗೆರೆ ತಾಲ್ಲೂಕು

ಮ್ಯಾನೇಜರ್, ದಿ ಪೀಪಲ್ಸ್ ಛಾಯ್ಸ್,
ನಂ.279/4, ಹಳೇ ಬಸ್ ಸ್ಟ್ಯಾಂಡ್ ಎದುರು,
ಮಹಿಳಾ ಸಮಾಜ ರಸ್ತೆ ಹಿಂಭಾಗ, ದಾವಣಗೆರೆ.

**ಪ್ರಕಟಣೆ**

ಶ್ರೀಮತಿ 1) ಶಾರದಮ್ಮ 2) ಎಂ. ದೇವಿಕಾ 3) ಎಂ. ವಿನಾಯಕ 4) ಎಂ. ಅನ್ನಪೂರ್ಣೇಶ್ವರಿ ಇವರುಗಳಾದ ತಾವು ಮೃತ ಮೌನೇಶಿ ಇವರ ಪತ್ನಿ ಮತ್ತು ಮಕ್ಕಳುಗಳು ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಮೌನೇಶಿ ರವರು ಒಂದನೇ ಪ್ರತಿವಾದಿಗಳಾದ ದಿ ಪೀಪಲ್ಸ್ ಛಾಯ್ಸ್ ಇವರ ಕಂಪನಿ (ಲಾರಿ)ರಲ್ಲಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಪಿ.ಆರ್. 884 ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ, ದಾವಣಗೆರೆ ಜಿಲ್ಲೆ, ದಾವಣಗೆರೆ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

**ಅಧಿಸೂಚನೆ**

**ಸಂಖ್ಯೆ:ಎಲ್.ಆರ್.ಎಫ್/ಸಿಆರ್:155/03-04, ದಿನಾಂಕ: 25ನೇ ಮೇ 2004**

**ವಿಷಯ:** ಶ್ರೀ ರವಿಶಂಕರ್, ವಿದ್ಯಾ ಮಂದಿರ ಟ್ರಸ್ಟ್ ರವರು ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಬಿ.ಎಂ. ಕಾವಲು ಗ್ರಾಮದ ಸ.ನಂ. 269,270 ರಲ್ಲಿ 8-00 ಎಕರೆ/ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಅನುಮತಿ ಕೋರಿರುವ ಬಗ್ಗೆ.

ಶ್ರೀ ರವಿಶಂಕರ್, ವಿದ್ಯಾ ಮಂದಿರ ಟ್ರಸ್ಟ್, ನಂ. 19, 30ನೇ ಕ್ರಾಸ್, 11ನೇ ಮುಖ್ಯ ರಸ್ತೆ, 4ನೇ ಟಿ ಬ್ಲಾಕ್, ಜಯನಗರ, ಬೆಂಗಳೂರು-41ರವರು ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಬಿ.ಎಂ. ಕಾವಲು ಗ್ರಾಮದ ಸ.ನಂ. 269 ರಲ್ಲಿ 4-00 ಎಕರೆ ಮತ್ತು 270 ರಲ್ಲಿ 4-00 ಒಟ್ಟು 8-00 ಎಕರೆ/ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ಮಾಡಿರುವ ಬೇಡಿಕೆ ಹಾಗೂ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ 15 ಎ ಮತ್ತು ನಮೂನೆ 15 ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪ ವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪ ವಿಭಾಗ ರವರ ಪತ್ರದ ಸಂಖ್ಯೆ:ಎಲ್.ಆರ್.ಎಫ್:257/02-03, ದಿ:11.2.2004ರಲ್ಲಿ ಪ್ರಸ್ತಾಪಿತ ಎಂ.ಬಿ. ರಾಮ್ ಗ್ರಾಮದ ಮೇಲ್ಕಂಡ ಸರ್ವೆ ನಂ. 269 ಮತ್ತು 270 ರಲ್ಲಿ ಒಟ್ಟು 8-00 ಎಕರೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1)ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪ ನೊಂದಣಾಧಿಕಾರಿಗಳ ಕಛೇರಿ ಜಯನಗರ ಉಪನೊಂದಣಾಧಿಕಾರಿಗಳ ಕಛೇರಿಯಲ್ಲಿ ದಿನಾಂಕ:10.9.1999 ರಂದು ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಸಲು ಒಪ್ಪಂದ ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಭೂ ಮಂಜೂರಾತಿ ನಿಯಮಾವಳಿಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರಡಿ ತೋಟಗಾರಿಕೆ ಮತ್ತು ಪುಷ್ಪಗಾರಿಕೆ ಉದ್ದೇಶಕ್ಕೆ 20 ಯುನಿಟ್‌ಗಳಿದ್ದು ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಕಾಯ್ದೆ 1995ರ ಪ್ರಕಾರ ಕಲಂ 109(1)(11) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮ 1996ರ 38 ಬಿ (2) (ಎ) ಮತ್ತು (ಬಿ) ರಲ್ಲಿನ ಷರತ್ತುಗಳನ್ನು ಪೂರೈಸಿದ್ದು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 63, 79ಎ 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ ಬಿ.ಎಂ. ಕಾವಲು ಗ್ರಾಮದ ಮೇಲ್ಕಂಡ ಸರ್ವೆ ನಂ.269 ಮತ್ತು 270 ರಲ್ಲಿನ ಒಟ್ಟು 8-00 ಎಕರೆ ಜಮೀನನ್ನು ಶ್ರೀ ರವಿಶಂಕರ್, ವಿದ್ಯಾ ಮಂದಿರ ಟ್ರಸ್ಟ್, ಬೆಂಗಳೂರು ಇವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109(1) (11)ರಡಿ ಹಾಗೂ ಸರ್ಕಾರದ ಅಧಿಸೂಚನೆ ತಿದ್ದುಪಡಿ ಸಂ: ಕಾಇ 47 ಶಾಸನ 2001

ಬೆಂಗಳೂರು ದಿ:23-4-2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ಲಿಖಿತ ಮಾಹಿತಿಯನ್ನು ತಹಶೀಲ್ದಾರ್ ರವರ ಮುಖಾಂತರ ಈ ಕಛೇರಿಗೆ ನೀಡತಕ್ಕದ್ದು.
2) ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956 ಕಲಂ 38ರಲ್ಲಿ ಹೇಳಿರುವಂತೆ ಶೇಕಡ 55 ಪೈಡ್ ಅಪ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತು ಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾವಣೆ ಮಾಡಬಾರದು.
3) ಸದರಿ ಜಮೀನು ಸಿ.ಡಿ.ಪಿ ಪ್ರಕಾರ ಹಸಿರು ಪಟ್ಟಿಯಲ್ಲಿ ಬರುತ್ತಿದ್ದು ಸಂಸ್ಥೆಗೆ ಉಪಯೋಗಿಸಿಕೊಳ್ಳಲು ಭೂ ಉಪಯೋಗದ ಅವಶ್ಯಕತೆ ಇದ್ದಲ್ಲಿ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4) ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು.
5) ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿಡಿಪಿ, ಒಡಿಪಿ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು
6) ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7) ಈ ಅನುಮತಿಯು ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರನ್ವಯ ಮಾತ್ರವಾಗಿರುತ್ತದೆ. ಬೇರೆ ಕಾಯ್ದೆಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಗಳಡಿ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್. 807 ವಿಶೇಷ ಜಿಲ್ಲಾಧಿಕಾರಿಗಳು (ಕಂ) ಬೆಂಗಳೂರು ಜಿಲ್ಲೆ.

**ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿಯ ನಡವಳಿಗಳು, ಬೆಂಗಳೂರು**

**ವಿಷಯ:** ಶ್ರೀಮತಿ ಎಸ್.ಎಂ. ಮುನವಳ್ಳಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ರಾಮದುರ್ಗ, ಅವರ ಹೆಸರನ್ನು ಬದಲಾವಣೆ ಮಾಡುವ ಕುರಿತು

**ಉಲ್ಲೇಖ:**
1. ಶ್ರೀಮತಿ ಎಸ್.ಎಂ. ಮುನವಳ್ಳಿ, ಸಹಾಯಕ ಸರ್ಕಾರಿ ಅಭಿಯೋಜಕರು, ರಾಮದುರ್ಗ, ಅವರ ಮನವಿ ದಿನಾಂಕ:18.12.2003.
2. ಸರ್ಕಾರದ ಆದೇಶ ಸಂಖ್ಯೆ:ಡಿಪಿಎಆರ್:3:ಡಿಸಿಎನ್:80, ದಿನಾಂಕ: 7.5.1980.
3. ಈ ಕಛೇರಿಯ ಪತ್ರ ಸಂಖ್ಯೆ:ಡಿಪಿಎನ್:ಸಿಶಾ-1:295:2003-04, ದಿನಾಂಕ: 9.1.2004.
4. ಸರ್ಕಾರದ ಪತ್ರ ಸಂಖ್ಯೆ:ಲಾ 36 ಪಿಪಿಇ 04, ದಿನಾಂಕ: 20.03.2004.

**ಪ್ರಸ್ತಾವನೆ:**

ಶ್ರೀಮತಿ ಎಸ್.ಎಂ. ಮುನವಳ್ಳಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿ.ವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ರಾಮದುರ್ಗ, ಅವರು ಉಲ್ಲೇಖ (1)ರ ಮನವಿಯನ್ನು ಈ ಕಛೇರಿಗೆ ಸಲ್ಲಿಸಿ, ಸರ್ಕಾರದ ಆದೇಶ ಸಂಖ್ಯೆ:ಡಿಪಿಎಆರ್:3:ಡಿಸಿಎನ್:89, ದಿನಾಂಕ: 7.5.1980ರ ಪ್ರಕಾರ, ಮಹಿಳಾ ಸರ್ಕಾರಿ ನೌಕರರು ಮದುವೆಯಾದ ನಂತರ, ಅವರ ಹೆಸರಿನಲ್ಲಿ ಅವರ ಪತಿಯವರ ಹೆಸರನ್ನು ಸೇರ್ಪಡೆ ಮಾಡಿ ಹೆಸರನ್ನು ಬದಲಾಯಿಸಿಕೊಳ್ಳಲು ಈ ಕೆಳಕಂಡ ದಾಖಲಾತಿಗಳನ್ನು ಅಂದರೆ ಪ್ರಮಾಣ ಪತ್ರ, ವಿವಾಹ ಆಮಂತ್ರಣ ಪತ್ರಿಕೆ, ಹೆಸರು ಬದಲಾವಣೆ ಮಾಡುವ ಬಗ್ಗೆ ಅವರ ಪತಿಯು ನೀಡಿರುವ ಒಪ್ಪಿಗೆ ಪತ್ರ, ಹೆಸರು ಬದಲಾವಣೆ ಕುರಿತು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆ ಆಗುವ ಸಲುವಾಗಿ ಪ್ರಕಟಣಾ ಶಿಲ್ಕನ್ನು ಘನ ಸರ್ಕಾರಕ್ಕೆ ಪಾವತಿ ಮಾಡಿದ ಬಗ್ಗೆ ರೂ. 60-00ರ ಚಲನ್ ನಂ. 19, ದಿನಾಂಕ: 17.9.2003, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ರಾಮದುರ್ಗ, ರ ಪ್ರತಿಯನ್ನು ಸಲ್ಲಿಸಿರುತ್ತಾರೆ. ಸದರಿ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಸಮಂಜಸವೆಂದು ಕಂಡುಬಂದಿದ್ದರಿಂದ, ಈ ಬಗ್ಗೆ ಸೂಕ್ತ ಆದೇಶ ಹೊರಡಿಸುವಂತೆ ಈ ಕಛೇರಿಯ ಉಲ್ಲೇಖ (3)ರ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿತ್ತು.

ಸರ್ಕಾರದ ಉಲ್ಲೇಖ (4)ರ ಪತ್ರದಲ್ಲಿ, ಮಹಿಳಾ ಸರ್ಕಾರಿ ನೌಕರರು ಮದುವೆ ಆದ ನಂತರ, ಅವರ ಹೆಸರಿನ ಮುಂದೆ ಪತಿಯ ಹೆಸರನ್ನು ಸೇರಿಸಿಕೊಂಡು ಬದಲಾಯಿಸಲು, ಇಲಾಖಾ ಮುಖ್ಯಸ್ಥರಿಗೂ ಅಧಿಕಾರವಿರುವುದರಿಂದ, ಸಂಬಂಧಪಟ್ಟ ದಾಖಲೆಗಳನ್ನು ಪರಿಶೀಲಿಸಿ, ಸಮಂಜಸ ಹಾಗೂ ತೃಪ್ತಿಕರವೆಂದು ಕಂಡುಬಂದಲ್ಲಿ, ಹೆಸರನ್ನು ಬದಲಾಯಿಸಿ ನಾಮ ನಿರ್ದೇಶನ ಮಾಡುವಂತೆ ನಿರ್ದೇಶನಗಳನ್ನು ನೀಡಲಾಗಿರುತ್ತದೆ. ಆದ್ದರಿಂದ, ಸದರಿಯವರ ಹೆಸರನ್ನು ಶೈಲಾ ಉಮೇಶ್ ಅಂಗಡಿ ಎಂದು ಬದಲಾಯಿಸಿ ನಾಮ ನಿರ್ದೇಶನವನ್ನು ಮಾಡುವ ಕುರಿತು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ:ಡಿಪಿಎನ್:ಸಿಶಾ-1:03:2004-05, ಬೆಂಗಳೂರು, ದಿನಾಂಕ: 6ನೇ ಏಪ್ರಿಲ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀಮತಿ ಎಸ್.ಎಂ. ಮುನವಳ್ಳಿ, ಸಹಾಯಕ ಸರ್ಕಾರಿ

ಅಭಿಯೋಜಕರು, ಸಿ.ಜೆ. (ಕಿ.ವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ರಾಮದುರ್ಗ, ಅವರ ಹೆಸರನ್ನು "ಶ್ರೀಮತಿ ಶೈಲಾ ಉಮೇಶ್ ಅಂಗಡಿ" ಎಂದು ಬದಲಾಯಿಸಿ ನಾಮ ನಿರ್ದೇಶನ ಮಾಡಲಾಗಿದೆ.

ಆರ್.ಜೆ. ದೇಸಾಯಿ

ಪಿ.ಆರ್. 808 ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು, ಬೆಂಗಳೂರು.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ ನ್ಯಾಯಾಲಯ,**
**ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ**

**ಉಪಸ್ಥಿತರು** : ಶ್ರೀ ಕೆ. ಲೋಕನಾಥಶೆಟ್ಟಿ,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.

**ಫಿರ್ಯಾದಿದಾರರು** : ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ

**ಅರ್ಜಿದಾರರು** : ಮೆ:ಕೊಠಾರಿ ಫೈನಾನ್ಸ್ ಹೆಚ್.ಪಿ. ಕಲತ್ತಿ ಪಿಲೈ ರಸ್ತೆ, ಮದ್ರಾಸ್ ಇವರ ಪರವಾಗಿ ವಿಶೇಷ ಅಧಿಕಾರ ಪತ್ರದ ಮೇಲೆ ಪರ್ವಿನ್ ಕುಮಾರ್, ಬಿನ್ ರಾಮಕೃಷ್ಣನ್, ಫೈನಾನ್ಸ್ ಏಜೆಂಟ್, ಕೊಠಾರಿ ಫೈನಾನ್ಸ್ ವಲ್ಲಿಯ ಚರ್ಚ್, ಕಂಕಡಿ, ಮಂಗಳೂರು (ಶ್ರೀ ಎ.ಟಿ. ಬೆಳ್ಳಿಯಪ್ಪ, ವಕೀಲರು, ಶಿವಮೊಗ್ಗ)

**ಪ್ರಕರಣದ ಸಾರಾಂಶ:**

ದಿನಾಂಕ: 11-10-95 ರಂದು ಟಾಟಾ ಲಾರಿ ನೊಂದಣೆ ಸಂಖ್ಯೆ:ಜಿ.ಡಿ.ಎಸ್:6680 ವಾಹನದಲ್ಲಿ ಒಟ್ಟು 1126 ಕೆಜಿ ಶ್ರೀಗಂಧವನ್ನು ಯಾವುದೇ ತರಹದ ರಹದಾರಿ ಇಲ್ಲದೇ ಅಕ್ರಮವಾಗಿ ರಿಪ್ಪನ್‌ಪೇಟೆ ಆಯನೂರು ಮುಖ್ಯರಸ್ತೆಯಲ್ಲಿ ಬೈರಾಪುರ ಗ್ರಾಮ ಕಂಚನಾಳಕ್ಕೆ ಹೋಗುವ ತಿರುವಿನ ಬಳಿ ಸಾಗಿಸುತ್ತಿದ್ದಾಗ, ಶಿವಮೊಗ್ಗ ಅರಣ್ಯ ಸಂಚಾರಿ ದಳ, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಹಾಗೂ ಸಿಬ್ಬಂದಿಯವರು ಪತ್ತೆ ಹಚ್ಚಿ ವಾಹನ ಹಾಗೂ ಶ್ರೀಗಂಧವನ್ನು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಪಂಚನಾಮೆ ಕ್ರಮ ಜರುಗಿಸಿ ವಾಹನ ಹಾಗೂ ಶ್ರೀಗಂಧದ ಬಗ್ಗೆ ಪ್ರಕರಣವನ್ನು ದಾಖಲು ಮಾಡಿಕೊಂಡು, ವಾಹನ ಜಿ.ಡಿ.ಎಸ್:6680 ಟಾಟಾ ಲಾರಿಯ ಛಾಸ್ಸಿ ನಂ.344052-208768 ಇಂಜಿನ್ ನಂ. 692 ಡಿ 02:216162 ಎಂದಿರುತ್ತದೆಂದು ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಆಸಾಮಿಗಳು ಪತ್ತೆಯಾಗಿರುವುದಿಲ್ಲವೆಂದು ತಿಳಿಸುತ್ತಾ, ಸಂಬಂಧಪಟ್ಟ ದಾಖಲಾತಿಗಳೊಂದಿಗೆ ವಾಹನ ಮತ್ತು ಶ್ರೀಗಂಧವನ್ನು 1963ನೇ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳುವಂತೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಯವರು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿದ್ದು ಇರುತ್ತದೆ. ಅದರಂತೆ ವಾಹನ ಮತ್ತು ಶ್ರೀಗಂಧವನ್ನು ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ರವರ ಸುಪರ್ದಿಗೆ ಮುಂದಿನ ಆದೇಶವಾಗುವವರೆವಿಗೂ ಸುರಕ್ಷತೆಯಾಗಿ ಇಟ್ಟುಕೊಳ್ಳಲು ಆದೇಶಿಸಲಾಗಿತ್ತು.

ಹಿಂದಿನ ಅಧಿಕಾರಿಗಳು ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನದ ಮಾಹಿತಿಯನ್ನು ಕೋರಿ ಡೈರೆಕ್ಟರ್ ಆಫ್ ಟ್ರಾನ್ಸ್‌ಪೋರ್ಟ್, ಗೋವಾ ಪಣಜಿರವರಿಗೆ ದಿನಾಂಕ:13-10-95 ಮತ್ತು 22-11-95 ರಂದು ಪತ್ರ ಬರೆದು ವಾಹನದ ಮಾಲೀಕರ ಮಾಹಿತಿಯನ್ನು ಒದಗಿಸುವಂತೆ ಕೋರಲಾಗಿತ್ತು. ಹಾಗೂ ಸಾರ್ವಜನಿಕರ ಗಮನಕ್ಕೆ ತರಲು ನಿರ್ದೇಶಕರು ವಾರ್ತಾ ಮತ್ತು ಪ್ರಚಾರ ಇಲಾಖೆ, ಹಾಗೂ ಸಂಕಲನಕಾರರು, ಕರ್ನಾಟಕ ರಾಜ್ಯ ಪತ್ರ, ಬೆಂಗಳೂರುರವರಲ್ಲಿ ಪ್ರಕಟಣೆಯನ್ನು ಪ್ರಕಟಿಸುವಂತೆ ಕೋರಲಾಗಿತ್ತು. ಅದರಂತೆ ಪ್ರಕಟಣೆಯು ದಿನಾಂಕ: 18-11-95ರ ಉದಯವಾಣಿ ದಿನಪತ್ರಿಕೆಯಲ್ಲಿ ಹಾಗೂ ಡಿಸೆಂಬರ್ 26-1996ರ ಭಾಗ-3 ಸೆಕ್ಷನ್-2ರ ಪುಟ ಸಂಖ್ಯೆ:1149ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡಿರುತ್ತದೆ.

ಈ ಮಧ್ಯೆ ವಾಹನಕ್ಕೆ ಫೈನಾನ್ಸ್ ನೀಡಿದ ಸಂಸ್ಥೆಯಾದ ಮೆ: ಕೊಠಾರಿ ಫೈನಾನ್ಸ್‌ರವರ ಪರವಾಗಿ ವಿಶೇಷ ಅಧಿಕಾರ ಪತ್ರವನ್ನು (ಜಿ.ಪಿ.ಎ.ಹೋಲ್ಡರ್) ಪಡೆದುಕೊಂಡ ಪರ್ವಿನ್ ಕುಮಾರ್ ಬಿನ್ ರಾಮಕೃಷ್ಣನ್ ವಲ್ಲಿಯ ಚರ್ಚ್, ಕಂಕಡಿ, ಮಂಗಳೂರು ಇವರು ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ದಿನಾಂಕ:24-11-95 ರಂದು ವಾಹನವನ್ನು ಮಧ್ಯಂತರ ಬಿಡುಗಡೆ ಕೇಳಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಹಾಗೂ ಮನೋಹರ್ ಕೊಟ್ಯಾನ್ ಬಿನ್ ದಯಾನಂದ ಕೊಟೈನ್, ಅಕ್ಷಯ ನಿಲಯ, ಆದರ್ಶನಗರ, ಚಿಲಂಬಿ ಮಂಗಳೂರು ಇವರು ಈ ಪ್ರಾಧಿಕಾರಕ್ಕೆ ದಿನಾಂಕ:12-01-96 ರಂದು ಪತ್ರ ಬರೆದು, ಅದರಲ್ಲಿ ಜಿ.ಡಿ.ಎಸ್:6680ರ ಲಾರಿ ಮಾಲೀಕನಾಗಿದ್ದು, ಸದರಿ ಲಾರಿಯನ್ನು ಕೊಠಾರಿ ಫೈನಾನ್ಸ್‌ರಲ್ಲಿ ಒತ್ತೆಯಿಟ್ಟು ಸಾಲಪಡೆದಿರುವುದಾಗಿ ತಿಳಿಸಿದ್ದು ಸಾಲದ ಕಂತುಗಳನ್ನು ಫೈನಾನ್ಸ್‌ಗೆ ಕಟ್ಟಬೇಕಾಗಿರುವುದರಿಂದ ಕಟ್ಟಿರುವುದಿಲ್ಲ, ಆದ್ದರಿಂದ ವಾಹನವನ್ನು ಫೈನಾನ್ಸ್‌ರವರಿಗೆ ಬಿಟ್ಟುಕೊಡಲು ತನ್ನದೇನೂ ತಕರಾರಿರುವುದಿಲ್ಲ ಎಂಬುದಾಗಿ ತಿಳಿಸಿರುತ್ತಾರೆ.

ಮುಂದುವರಿದು ಅರ್ಜಿದಾರರು ಸಲ್ಲಿಸಿದ ದಾಖಲಾತಿಗಳನ್ನು ಪರಿಶೀಲಿಸಿ, ಫೈನಾನ್ಸ್‌ರವರ ಪರವಾಗಿ ವಕೀಲರು ಮಧ್ಯಂತರ ಬಿಡುಗಡೆ ಕೇಳಿದ ವಾಹನದ ಅರ್ಜಿಯ ಬಗ್ಗೆ ಸಹಾಯಕ ಅಭಿಯೋಗ ನಿರ್ದೇಶಕರು ತಕರಾರನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಅನಂತರ ಅರ್ಜಿದಾರರು ಸಲ್ಲಿಸಿದ ದಾಖಲಾತಿಯ ಮೇಲೆ ದಿನಾಂಕ:12-04-96 ರಂದು ಈ ಪ್ರಾಧಿಕಾರದಿಂದ ಮಂಗಳೂರು ಪ್ರಾದೇಶಿಕ ಸಾರಿಗೆ ಅಧಿಕಾರಿಯವರಿಗೆ ಪತ್ರ ಬರೆದು ವಾಹನದ ಬಿ ವರದಿಯನ್ನು ತರಿಸಲಾಗಿರುತ್ತದೆ. ಸದರಿ ಪ್ರಾದೇಶಿಕ ಸಾರಿಗೆ ಅಧಿಕಾರಿಯವರು ನೀಡಿದ ಬಿ ವರದಿಯ ಮೇರೆಗೆ ವಾಹನ ಮಾಲೀಕರಾದ ಮನೋಹರ್ ಬಿನ್ ದೇವದಾಸ್ ಕೊಟ್ಯಾನ್, ಮಂಗಳೂರು ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ:13-05-96 ರಂದು ಕಾರಣ ಕೇಳುವ ಪತ್ರವನ್ನು ಜಾರಿ ಮಾಡಲಾಗಿದ್ದು, ಸದರಿ ಪತ್ರ ಜಾರಿಯಾಗದೇ ವಾಪಸ್ಸು ಬಂದಿರುತ್ತದೆ.

ಅನಂತರ ಈ ಪ್ರಾಧಿಕಾರವು ದಿನಾಂಕ:10-06-96 ರಂದು, ಪ್ರಕರಣದ ದಾಖಲಾತಿಗಳನ್ನು ಮತ್ತು ಸಹಾಯಕ ಅಭಿಯೋಗ ನಿರ್ದೇಶಕರು ನೀಡಿದ ತಕರಾರನ್ನು ಪರಿಶೀಲಿಸಿ, ದಿನಾಂಕ:24-11-95ರಂದು ಫೈನಾನ್ಸ್‌ರವರ ಪರವಾಗಿ ವಕೀಲರು ಮಧ್ಯಂತರ ಬಿಡುಗಡೆ ಕೇಳಿದ ವಾಹನದ ಅರ್ಜಿಯನ್ನು ತಿರಸ್ಕೃತಗೊಳಿಸಿ ಆದೇಶಿಸಿದ್ದು ಇರುತ್ತದೆ. ಸದರಿ ಆದೇಶದ ವಿರುದ್ಧ ಅರ್ಜಿದಾರರು ಪ್ರಿನ್ಸಿಪಲ್ ಸೆಶನ್ ನ್ಯಾಯಾಲಯ, ಶಿವಮೊಗ್ಗದಲ್ಲಿ ಮೇಲ್ಮನವಿ ಸಲ್ಲಿಸಿದ್ದು, ಅದು ಕ್ರಿ.ಮಿ.ಅ.ನಂ.39:96 ಆಗಿರುತ್ತದೆ. ಅನಂತರ ಮಾನ್ಯ ನ್ಯಾಯಾಲಯವು ಅರ್ಜಿದಾರರು ಸಲ್ಲಿಸಿದ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ದಿನಾಂಕ:27-05-2002 ರಂದು ಆದೇಶಿಸಿದ್ದು ಇರುತ್ತದೆ.

ಅನಂತರ ಈ ಪ್ರಾಧಿಕಾರದಿಂದ ಪುನಃ ವಾಹನ ಮಾಲೀಕರಾದ ಶ್ರೀ ಮನೋಹರ್ ಬಿನ್ ದೇವದಾಸ್ ಕೊಟ್ಯಾನ್, ಮಂಗಳೂರು ರವರಿಗೆ ಕಾರಣ ಕೇಳುವ ಪತ್ರವನ್ನು ದಿನಾಂಕ:25-06-02 ರಂದು ರಿಜಿಸ್ಟರ್ ಅಂಚೆ ಮುಖಾಂತರ ಕಳುಹಿಸಿದ್ದು, ಅದು ಜಾರಿಯಾಗದೇ ವಾಪಸ್ಸು ಬಂದಿರುತ್ತದೆ. ಮುಂದುವರಿದು ಈ ಪ್ರಕರಣದ ವಿಚಾರಣೆಯನ್ನು ಈ ಪ್ರಾಧಿಕಾರದಲ್ಲಿ ದಿನಾಂಕ:22-01-04, 26-02-04 ಮತ್ತು 11-03-04 ರಂದು ನಿಗದಿಪಡಿಸಿ ಮೆ:ಕೊಥಾರಿ ಫೈನಾನ್ಸ್ ಪರ ವಕಾಲತ್ತು ವಹಿಸಿದ ವಕೀಲರಿಗೆ ನೋಟೀಸ್ ಕೊಟ್ಟಾಗಲೂ ವಕೀಲರು ವಿಚಾರಣೆಗೆ ಹಾಜರಾಗದೇ ನಿರ್ಲಕ್ಷತನ ತೋರಿಸಿರುತ್ತಾರೆ.

ಈ ಮಧ್ಯೆ ಈ ಪ್ರಾಧಿಕಾರದಲ್ಲಿ ದಿನಾಂಕ:26-02-04 ರಂದು ನಡೆದ ವಿಚಾರಣೆಯಲ್ಲಿ ಅಭಿಯೋಜನಾ ಪರ ಸಾಕ್ಷ್ಯವನ್ನು ಸಹಾಯಕ ಅಭಿಯೋಗ ನಿರ್ದೇಶಕರು ವಿಚಾರಿಸಿಕೊಂಡು ನಿಶಾನೆಗಳನ್ನು ಗುರುತಿಸಲಾಗಿದೆ. ಸಂಬಂಧಪಟ್ಟ ದಾಖಲಾತಿಗಳನ್ನು ಪರಿಶೀಲಿಸಿದಾಗ ದಿನಾಂಕ: 11-10-95 ರಂದು ಜಿಡಿಎಸ್:6680ರ ವಾಹನದಲ್ಲಿ ಅಕ್ರಮವಾಗಿ ಶ್ರೀಗಂಧ ಕಳ್ಳಸಾಗಾಣಿಕೆ ಮಾಡಿರುವುದು ಸ್ಪಷ್ಟಪಡುತ್ತದೆ.

ಅರ್ಜಿದಾರರ ಪರ ವಕೀಲರು ದಿನಾಂಕ:24-11-95ರಂದು ಈ ಪ್ರಾಧಿಕಾರಕ್ಕೆ ಹಾಜರಾಗಿ ಫೈನಾನ್ಸ್‌ರವರ ಪರವಾಗಿ ವಾಹನವನ್ನು ಮಧ್ಯಂತರ ಬಿಡುಗಡೆ ಕೇಳಿ ಅರ್ಜಿ ಸಲ್ಲಿಸಿದ್ದನ್ನು ಹೊರತುಪಡಿಸಿದರೆ, ಉಳಿದ ಯಾವುದೇ ಸಂದರ್ಭದಲ್ಲಿಯೂ ಹಾಜರಾಗದೇ ಇರುವುದರಿಂದ, ಪ್ರಕರಣದ ಬಗ್ಗೆ ಯಾವುದೇ ಆಸಕ್ತಿಯು ಇಲ್ಲವೆಂದು ಭಾವಿಸಲಾಗಿರುತ್ತದೆ. ಅರಣ್ಯ ಕಾಯ್ದೆ ಸೆಕ್ಷನ್ 71-ಎ ಪ್ರಕರಣದಲ್ಲಿ ಯಾವುದೇ ವಾಹನವು ಶ್ರೀಗಂಧದ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದೆ ಎಂದು ಮೇಲ್ನೋಟಕ್ಕೆ ಅಭಿಯೋಜನೆ ಸಿದ್ದಪಡಿಸಿದ ಮೇಲೆ ವಾಹನ ಮಾಲೀಕರು ತನ್ನ ತಿಳುವಳಿಕೆ ಇಲ್ಲದೇ ಅಥವಾ ತನ್ನ ಕೈಮೀರಿ ತಾನು ಎಲ್ಲಾ ಕಾಳಜಿ ವಹಿಸಿದ ನಂತರವೂ ಇಂತಹ ಅಪರಾಧದಲ್ಲಿ ಸಿಕ್ಕಿಹಾಕಿಕೊಂಡಿದೆ ಎಂದು ನಿಸ್ಸಂಶಯವಾಗಿ ಸಿದ್ದಪಡಿಸುವ ಸಂಪೂರ್ಣ ಭಾರ ಮಾಲೀಕನ ಮೇಲಿದ್ದರಿಂದ ಅದನ್ನು ಸಿದ್ದಪಡಿಸುವಲ್ಲಿ ವಾಹನ ಮಾಲೀಕರು ಮತ್ತು ಮೆ:ಕೊಥಾರಿ ಫೈನಾನ್ಸ್‌ರವರು ಸಂಪೂರ್ಣ ವಿಫಲರಾಗಿರುತ್ತಾರೆ.

ಮುಂದುವರಿದು ವಾಹನದಲ್ಲಿ ವಿಶೇಷವಾಗಿ ಗುಪ್ತವಾಗಿ ಕಂಪಾರ್ಟ್‌ಮೆಂಟ್ ನಿರ್ಮಿಸಿರುವುದನ್ನು ಕಂಡರೆ, ಅಕ್ರಮ ಅರಣ್ಯ ಉತ್ಪನ್ನವನ್ನು ಸಾಗಾಣಿಕೆ ಮಾಡುವ ಉದ್ದೇಶದಿಂದಲೇ ಈ ರೀತಿ ವಾಹನದಲ್ಲಿ ರಹಸ್ಯವಾಗಿ ಕಂಪಾರ್ಟ್‌ಮೆಂಟ್ ನಿರ್ಮಿಸಿರುವುದಾಗಿ ಖಚಿತವಾಗುವುದರೊಂದಿಗೆ ಅಬಿಯೋಜನಾ ಸಾಕ್ಷ್ಯಕ್ಕೆ ಪುಷ್ಟಿಕೊಡುತ್ತದೆ.

ಈ ಎಲ್ಲಾ ಕಾರಣಗಳಿಂದಾಗಿ ದಿನಾಂಕ:11-10-95 ರಂದು ಲಾರಿ ನೊಂದಣಿ ಸಂಖ್ಯೆ: ಜಿ.ಡಿ.ಎಸ್:6680ರ ವಾಹನದಲ್ಲಿ ಅಕ್ರಮವಾಗಿ ಶ್ರೀಗಂಧವನ್ನು ಕಾನೂನು ಬಾಹಿರವಾಗಿ ಸಾಗಾಣಿಕೆ ಮಾಡುತ್ತಿರುವುದು ಸಂಬಂಧಪಟ್ಟ ದಾಖಲಾತಿಯಿಂದ ದೃಢಪಟ್ಟಿರುವುದ ರಿಂದ, ಸದರಿ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುವುದರಿಂದ ಈ

**ಆದೇಶ**

**ಸಂಖ್ಯೆ:ಎ1:71ಎ:ಅಸಂದಳ:ಅಮೊ:156:95-96, ದಿನಾಂಕ: 6ನೇ ಮೇ 2004**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ ಆದ ನಾನು ಶ್ರೀ ಕೆ. ಲೋಕನಾಥಶೆಟ್ಟಿ, ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71-ಎ ಪ್ರಕಾರ ಪ್ರದತ್ತವಾದ ಅಧಿಕಾರದಂತೆ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಟಾಟಾ ಲಾರಿ ನೊಂದಣಿ ಸಂಖ್ಯೆ:ಜಿಡಿಒಸ್:6680 ಇಂಜಿನ್ ನಂ. 692 ಡಿ 02:216162 ಛಾಸ್ಸಿ ಸಂಖ್ಯೆ:344052208768 ಮತ್ತು 1126 ಕೆಜಿ ಶ್ರೀಗಂಧವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇವಾರಿ ಮಾಡುವಂತೆ ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಶ್ರೀಗಂಧ ಎಲ್ಲಾ ಋಣಭಾರಗಳಿಂದ ವಿಮುಕ್ತವಾಗಿರುತ್ತದೆ.

ಈ ಆದೇಶವು ಈ ದಿನ ಅಂದರೆ ದಿನಾಂಕ:06-05-04 ರಿಂದ ಸಂಪೂರ್ಣ ಜಾರಿಗೆ ಬರುತ್ತದೆ. ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸದೊಳಗೆ ವಾಹನದ ಬಾಧ್ಯತೆದಾರರು ಮೇಲ್ಮನವಿ ಸಲ್ಲಿಸಿ ತಡೆಯಾಜ್ಞೆ ತರದೇ ಇದ್ದರೆ ಅದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ. ಈ ಆದೇಶವು ದಿನಾಂಕ:06-05-04 ರಂದು ಬೆರಳಚ್ಚು ಮಾಡಿ, ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಕೆ. ಲೋಕನಾಥಶೆಟ್ಟಿ**

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ,
ಶಿವಮೊಗ್ಗ ವೃತ್ತ, ಶಿವಮೊಗ್ಗ.

**ಅನುಬಂಧ**

**ಅಭಿಯೋಜನಾ ಪರ ಸಾಕ್ಷಿಗಳು**

1) ಶ್ರೀ ಹೆಚ್. ಸಿದ್ದಪ್ಪ, ನಿವೃತ್ತ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಪಿಡಬ್ಲ್ಯೂ-1

**ಅಭಿಯೋಜನಾ ಪರ ನಿಶಾನೆಗಳು**

| | | |
|---|---|---|
| 1) | ಸ್ಥಳ ಮಹಜರ್ | ನಿಶಾನೆ - 1 |
| 2) | ಪ್ರಥಮ ವರ್ತಮಾನ ವರದಿ | ನಿಶಾನೆ - 2 |
| 3) | ಅಮಾನತ್ತು ವರದಿ | ನಿಶಾನೆ - 3 |
| 4) | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳ ವರದಿ | ನಿಶಾನೆ - 4 |
| 5) | ವಾಹನದ ಫೋಟೋ | ನಿಶಾನೆ - 5 |
| 6) | ವಾಹನ ಜಿ.ಡಿ.ಎಸ್:6680 | ಎಂ.ಒ.1 |
| 7) | ಶ್ರೀಗಂಧದ ತುಂಡುಗಳು | ಎಂಒ 2 ರಿಂದ 64 |

**ಕೆ. ಲೋಕನಾಥಶೆಟ್ಟಿ**

ಪಿ.ಆರ್. 809 ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ,
ಶಿವಮೊಗ್ಗ ವೃತ್ತ, ಶಿವಮೊಗ್ಗ.

**ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೊಪ್ಪಳ**

**ಪ್ರಕರಣ ಸಂಖ್ಯೆ:ಕಾಅಕೊ:ಕಾನಪ:22/F/2002 ದಿನಾಂಕ: 9ನೇ ಜೂನ್ 2004**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು**

ಶ್ರೀಮತಿ ಮುಮ್ತಾಜ್ ಬೇಗಂ
ಗಂಡ ಹೊನ್ನುರಸಾಬ ಸಾ।। ಗೋಡಾನ ಹತ್ತಿ
ಕ್ಯಾನಲ್ ಲೈನ್ ಕಾರಟಗಿ ತಾ।।ಗಂಗಾವತಿ.

1. ಶ್ರೀ ನಿಜಗುಣಯ್ಯ ಮಾಲೀಕರು,
ಮೆ।। ಬಾಲಾಜಿ ರೈಸ್ ಮಿಲ್ ಇಂಡಸ್ಟ್ರೀಸ್,
ಬೂದಗುಂಪಾ ರೋಡ್ ಕಾರಟಗಿ ತಾ।।ಗಂಗಾವತಿ.
2. ದಿ ಬ್ರ್ಯಾಂಚ್ ಮ್ಯಾನೇಜರ್,
ನ್ಯಾಷನಲ್ ಇನ್ಶೂರೆನ್ಸ್ ಕಂ. ಲಿ.,
ಲೋಹಾರ ವಾಡಿ, ರಾಯಚೂರು.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಪೀರಮ್ಮ ಗಂಡ ರಾಜಾಸಾಬ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ಕೆಲಸದಿಂದುಂಟಾದ ಅಪಘಾತದಿಂದ ಮೃತ:ಗಾಯ: ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923 ರಡಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಮೃತ ಪೀರಮ್ಮರಾದ ಶ್ರೀಮತಿ ಮುಮ್ತಾಜ ಬೇಗಂ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರೂ ಅಥವಾ ತಾವೂ ಸಹ ಮೃತ:ಗಾಯ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನದೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದ್ರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿಗಳು ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಪಿ.ಆರ್. 873 ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೊಪ್ಪಳ ಜಿಲ್ಲೆ, ಕೊಪ್ಪಳ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರವರ ನ್ಯಾಯಾಲಯ, ತುಮಕೂರು**

**ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ:ಸಿಆರ್-44/04 ದಿನಾಂಕ:29ನೇ ಮೇ 2004**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು**

1. ಕೆಂಪಮ್ಮ W/o ಪ್ರಸನ್ನ @ ಪ್ರಸನ್ನ ಕುಮಾರ್,
22 ವರ್ಷ
2. ಲಕ್ಷ್ಮಮ್ಮ ಕೋಂ ಲೇಟ್ ನಾಗರಾಜು
ವಯಸ್ಸು, 45 ವರ್ಷ
R/o ಕಾಮರಾಜನಹಳ್ಳಿ ಹುಲಿಕುಂಟೆ ಪೋಸ್ಟ್,
ಕೊರಟಗೆರೆ ತಾಲ್ಲೂಕು, ತುಮಕೂರು ಜಿಲ್ಲೆ.

1. ಹನುಮಣ್ಣ S/o ಹನುಮಂತಪ್ಪಾ, ಪ್ರಾಪ್ತರು
R/o ಗೌರಾಗನಹಳ್ಳಿ ಹುಲಿಕುಂಟೆ ಪೋಸ್ಟ್,
ಕೊರಟಗೆರೆ ತಾಲ್ಲೂಕು, ತುಮಕೂರು ಜಿಲ್ಲೆ.
2. ದಿ ಓರಿಯೆಂಟಲ್ ಇನ್‌ಶ್ಯೂರೆನ್ಸ್ ಕಂ.ಲಿ.,
ಬ್ರ್ಯಾಂಚ್ ಆಫೀಸ್ T.G.M.A ಬಿಲ್ಡಿಂಗ್
J.C. ರೋಡ್, ತುಮಕೂರು.

**ಪ್ರಕಟಣೆ**

ಅರ್ಜಿದಾರರು ತಮ್ಮ ಪತಿ ಆದ ಶ್ರೀ ಪ್ರಸನ್ನಕುಮಾರ್ ಇವರು ಪ್ರತಿವಾದಿ 01 ಇವರ ಟ್ರ್ಯಾಕ್ಟರ್ ಸಂ. KA-06-4503 4504, ರಲ್ಲಿ ಕೂಲಿ ಕೆಲಸ ಮಾಡಿಕೊಂಡಿದ್ದು, ದಿನಾಂಕ: 22-2-2004 ರಂದು ಸುವರ್ಣ ಮುಖಿ ನದಿ ಕೊರಟಗೆರೆ ಹತ್ತಿರ, ಮಣ್ಣು ತುಂಬುವ ಸಮಯದಲ್ಲಿ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಪಿ.ಆರ್. 811 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ತುಮಕೂರು ಜಿಲ್ಲೆ, ತುಮಕೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರವರ ನ್ಯಾಯಾಲಯ, ತುಮಕೂರು**

**ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ:ಸಿಆರ್-45/2004 ದಿನಾಂಕ:29ನೇ ಮೇ 2004**

**ಅರ್ಜಿದಾರರು**

1. ನಾಗರತ್ನಮ್ಮ W/o ಲೇಟ್ ಚಂದ್ರ ವಯಸ್ಸು 22 ವರ್ಷ
2. ಚನ್ನಪ್ಪಾ S/o ಮರಿಯಪ್ಪಾ ವಯಸ್ಸು 52 ವರ್ಷ
3. ಕುಂಬಮ್ಮ W/o ಚನ್ನಪ್ಪಾ ವಯಸ್ಸು 50 ವರ್ಷ

**ವಿಳಾಸ** ಬರಡೆ ಹಳ್ಳಿ ತುಂಬಾಡಿ ಹೋಬಳಿ ಕೊರಟಗೆರೆ ತಾಲ್ಲೂಕು ತುಮಕೂರು ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು**

1. T.S. ಶ್ರೀನಿವಾಸ S/o ವೀರಣ್ಣ R/o ತುಂಬಾಡಿ (ಪೋಸ್ಟ್) ಕೊರಟಗೆರೆ ತಾಲ್ಲೂಕು ತುಮಕೂರು ಜಿಲ್ಲೆ.
2. ನ್ಯಾಷನಲ್ ಇನ್‌ಶ್ಯೂರೆನ್ಸ್ ಕಂ. ಲಿ., ಮುದ್ದಪ್ಪ ಕಾಂಪ್ಲೆಕ್ಸ್ ವಿವೇಕಾನಂದ ರಸ್ತೆ, ತುಮಕೂರು.

**ಪ್ರಕಟಣೆ**

ಅರ್ಜಿದಾರರು ತಮ್ಮ ಪತಿ ಆದ ಶ್ರೀ ಚಂದ್ರ ಇವರು ಪ್ರತಿವಾದಿ 01 ಇವರ ಟ್ರ್ಯಾಕ್ಟರ್ ಟ್ರೈಲರಿನಲ್ಲಿ ಸಂ. KA-06-T8680-81ರಲ್ಲಿ ಕೂಲಿ ಕೆಲಸ ಮಾಡಿಕೊಂಡಿದ್ದು, ದಿನಾಂಕ: 5-4-2004 ರಂದು ತುಂಬಾಡಿ ಟ್ಯಾಂಕ್ ಬೆಡ್ ಮಣ್ಣು ತುಂಬುವ ಸಮಯದಲ್ಲಿ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಪಿ.ಆರ್. 812 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ತುಮಕೂರು ಜಿಲ್ಲೆ, ತುಮಕೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರವರ ನ್ಯಾಯಾಲಯ, ತುಮಕೂರು**

**ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ:ಸಿಆರ್-46/04 ದಿನಾಂಕ:29ನೇ ಮೇ 2004**

**ಅರ್ಜಿದಾರರು**

1. ನಾಬದ್ರುನ್ನಿಸಾ W/o ಅಮ್‌ಜದ್ @ ಅಮ್‌ಜದ್ ಖಾನ್, ವಯಸ್ಸು 38 ವರ್ಷ.
2. ಅಮ್‌ಜದ್ @ ಅಮ್‌ಜದ್‌ಖಾನ್ S/o ಅಯ್ಯುಬ್, 55 ವರ್ಷ

**ಈರ್ವರ ವಿಳಾಸ**

4ನೇ ಕ್ರಾಸ್, ವಿನೋಬನಗರ, ತುಮಕೂರು

**ವಿರುದ್ಧ**

**ಪ್ರತಿವಾದಿಗಳು**

1. ಮಿ॥ ನಾಸರ್ S/o ಶಫಿ ಭೆರಿಯಾ ಗ್ರಾಮ (ಪೋಸ್ಟ್) K.R. ನಗರ ತಾಲ್ಲೂಕು, ಮೈಸೂರು ಜಿಲ್ಲೆ.
2. ನ್ಯಾಷನಲ್ ಇನ್‌ಶ್ಯೂರೆನ್ಸ್ ಕಂ. ಲಿ., ಬ್ರ್ಯಾಂಚ್ ಆಫೀಸ್, 871-A, ಪ್ರಿಸ್ಟೇಜ್ ಶಾಪಿಂಗ್ ಏರಿಯಾ (3ನೇ ಫ್ಲೋರ್) ರಾಮಸ್ವಾಮಿ ಸರ್ಕಲ್, ಮೈಸೂರು.

**ಪ್ರಕಟಣೆ**

ಅರ್ಜಿದಾರರು ತಮ್ಮ ಮಗನಾದ ಶ್ರೀ ನವೀದ್ @ ನಬೀದ್ ಇವರು ಪ್ರತಿವಾದಿ 01 ಇವರ ಲಾರಿ ಸಂ. KA-12-2087ರಲ್ಲಿ ಕ್ಲೀನರ್ ಆಗಿ ಕೆಲಸ ಮಾಡಿಕೊಂಡಿದ್ದು, ದಿನಾಂಕ: 24-11-2003 ರಂದು 7-15 ಬೆಳಿಗ್ಗೆ ಪೆತುಲಮ್ ಅಮರಮ್ ಈರಲ್ ಕೋಲ್ಲಿ ಸಮೀಪ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಪಿ.ಆರ್. 813 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ತುಮಕೂರು ಜಿಲ್ಲೆ, ತುಮಕೂರು.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪೂರ ಇವರಲ್ಲಿ**

**ಪ್ರಕಟಣೆ**

**ಮರಣ ಪ್ರಕರಣ ಸಂಖ್ಯೆ: ಕಾಅಕೊ:ಕಾನಪ:48:2004 ದಿನಾಂಕ: 19ನೇ ಏಪ್ರಿಲ್ 2004**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

ಬೌರಮ್ಮಾ ಶರಣಪ್ಪಾ ಕುಕನೂರ, ವಾಸ-ಮೈಲೇಶ್ವರ
ತಾಲ್ಲೂಕು: ಮುದ್ದೇಬಿಹಾಳ ಜಿಲ್ಲೆ: ಬಿಜಾಪುರ.
(ಇತರೆ ಒಬ್ಬರು)

1. ದಿ-ಸ್ಪೆಶಲ್ ಲ್ಯಾಂಡ್ ಅಕ್ವೀಜೇಶನ್ ಆಫೀಸರ್,
ಯುಕೆಪಿ ಆಲಮಟ್ಟಿ ತಾ:ಬಸವನ ಬಾಗೇವಾಡಿ,
ಜಿಲ್ಲೆ: ಬಿಜಾಪೂರ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ ಶರಣಪ್ಪಾ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ:7-6-2002 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ಶ್ರೀಮತಿ ಬೌರಮ್ಮಾ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ದಲಿಂಗಪ್ಪ ಆಲೂರು**

ಪಿ.ಆರ್. 814 ಕಾರ್ಮಿಕ ಪರಿಹಾರ ಆಯುಕ್ತರು, ಉಪ-ವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪೂರ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪೂರ ಇವರಲ್ಲಿ**

**ಪ್ರಕಟಣೆ**

**ಮರಣ ಪ್ರಕರಣ ಸಂಖ್ಯೆ: ಕಾಅಕೊ:ಕಾನಪ:49:2004 ದಿನಾಂಕ: 21ನೇ ಏಪ್ರಿಲ್ 2004**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

ಶ್ರೀಮತಿ-ಶೇಗಮ್ಮಾಲ ಉರ್ಫ್ ಶೇಖಮ್ಮಾಲ
ಎಸ್. ಮೋಕಯ್ಯಾ, ವಾಸ-ಕಾಡಾಯ್ಯಾ
ನಳ್ಳೂರು ತಾ-ತೆಂಕಾಶಿ, ಜಿಲ್ಲೆ:ತಿರುನೇಳವೇರಿ
(ತಮಿಳುನಾಡು ರಾಜ್ಯ) ಹಾಗೂ ಇತರೆ ಇಬ್ಬರು

1. ಡಿ. ಶ್ಯಾಂತಿ ಕೋಂ ದೊರೆಸ್ವಾಮಿ,
ಮೆ: ಬಾಲಮುರಗನ್ ತುಬೇವೆಲ್ಸ್,
ಮಿಡಲ್ಯಾಂಡ್ ಹೊಟೇಲ್, ಬಸವೇಶ್ವರ ಸರ್ಕಲ್,
ಬಿಜಾಪೂರ.
2. ದಿ ಮ್ಯಾನೇಜರ್,
ನ್ಯೂ ಇಂಡಿಯಾ ಅಸ್ಸೂರೆನ್ಸ್ ಕಂಪನಿ ಲಿ., ಗುಲ್ಬರ್ಗಾ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ ಎಸ್. ಮೋಕಯ್ಯಾ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ:31-11-2003 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ಶ್ರೀಮತಿ ಶೇಗಮ್ಮಾಲ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ದಲಿಂಗಪ್ಪ ಆಲೂರು**

ಪಿ.ಆರ್. 815 ಕಾರ್ಮಿಕ ಪರಿಹಾರ ಆಯುಕ್ತರು, ಉಪ-ವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪೂರ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪೂರ ಇವರಲ್ಲಿ**

**ಪ್ರಕಟಣೆ**

**ಮರಣ ಪ್ರಕರಣ ಸಂಖ್ಯೆ: ಕಾಅಕೊ:ಕಾನಪ:54:2004 ದಿನಾಂಕ: 27ನೇ ಏಪ್ರಿಲ್ 2004**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

ಶ್ರೀಮತಿ-ಸಾವುಬಾಯಿ ಶಾಂತಾರಾಮ ಬಂಡಗಾರ, ವಾಸ-ಹೆಗಡಿಯಾಲ ತಾ:ಜಿಲ್ಲೆ: ಬಿಜಾಪೂರ. (ಹಾಗೂ ಇತರೆ 3 ಜನರು)

1. ಮಿರ್. ವಿಜಯ ಶಾಂತಿಲಾಲ ಸಹಾ, ವಾಸ-295, ಮಂಗಳವಾರ ಪೇಟೆ, ಮಾಧವನಗರ, ಎನ್.ಎನ್. ಜಿಲ್ಲೆ:ಸಾಂಗಲಿ, (ಮಹಾರಾಷ್ಟ್ರ)
2. ದಿ-ಡಿವಿಜಿನಲ್ ಮ್ಯಾನೇಜರ್, ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ., ಹಣಮಶೆಟ್ಟಿ ಬಿಲ್ಡಿಂಗ್, ಬಿಜಾಪೂರ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ ಶಾಂತಾರಾಮ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ:29-3-2004 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ಶ್ರೀಮತಿ ಸಾವುಬಾಯಿ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ದಲಿಂಗಪ್ಪ ಆಲೂರು**

ಪಿ.ಆರ್. 816 ಕಾರ್ಮಿಕ ಪರಿಹಾರ ಆಯುಕ್ತರು, ಉಪ-ವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪೂರ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪೂರ ಇವರಲ್ಲಿ**

**ಪ್ರಕಟಣೆ**

**ಮರಣ ಪ್ರಕರಣ ಸಂಖ್ಯೆ: ಕಾಅಕೊ:ಕಾನಪ:55:2004 ದಿನಾಂಕ: 4ನೇ ಮೇ 2004**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

ಇಮತಾಜದಿ ಅಬ್ದುಲ್ ಇನಾಮದಾರ, ವಾಸ-ಬಿಜಾಪೂರ.

1. ಮೆಸರ್ಸ್-ಅಗ್ರವಾಲ ಟ್ರಾನ್ಸ್‌ಪೋರ್ಟ್ ಕಂಪನಿ ಶ್ರೀ ವಿಠಲ ಲಕ್ಷ್ಮೀ ಪ್ರಸನ್ನ, ಯಾದವ ಭವನ, ಅಜಮೀರ ರೋಡ, ಗಂಜ, ಕೃಷ್ಣ ಗೃಹ, ರಾಜಸ್ಥಾನ.
2. ಡಿವಿಜನಲ್ ಮ್ಯಾನೇಜರ್, ನ್ಯಾಷನಲ್ ಇನ್ಸೂರೆನ್ಸ್ ಕಂಪನಿ, ಮಾರುತಿ ಗಲ್ಲಿ, ಬೆಳಗಾವಿ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ ಅಬ್ದುಲ ಹುಸೇನ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ:17-3-2004 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ಶ್ರೀಮತಿ ಇಮಾತಾಜಬಿ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ದಲಿಂಗಪ್ಪ ಆಲೂರು**

ಪಿ.ಆರ್. 817 ಕಾರ್ಮಿಕ ಪರಿಹಾರ ಆಯುಕ್ತರು, ಉಪ-ವಿಭಾಗ-2, ಬಿಜಾಪೂರ ಜಿಲ್ಲೆ,ಬಿಜಾಪೂರ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪೂರ ಇವರಲ್ಲಿ**

**ಪ್ರಕಟಣೆ**

**ಮರಣ ಪ್ರಕರಣ ಸಂಖ್ಯೆ: ಕಾಅಕೊ:ಕಾನಪ:57:2004 ದಿನಾಂಕ: 5ನೇ ಮೇ 2004**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

ಅಜರನಬಿ, ಅಬ್ದುಲ ಶೇಖ (ಸಿಪಾಯಿ) ವಾಸ-ನೇರೂಲ, ಹೊಸ ಬಾಂಬೆ.

1. ಅಬ್ದುಲ ಗಫೂರ ಶೇಖ, ವಾಸ-ಸೆಕ್ಟರ್ ನಂ. 3 ಬಿಲ್ಡಿಂಗ್, ನಂ.23, ಎನ್ಎಲ್-5, ನೆರೂಲ, ರೂಮ್ ನಂ.4, ಹೊಸ ಬಾಂಬೆ.
2. ದಿ-ನ್ಯಾಷನಲ್ ಇನ್ಸೂರೆನ್ಸ್ ಕಂಪನಿ, ಮಾರುತಿ ಗಲ್ಲಿ, ಬೆಳಗಾವಿ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ ಅಬ್ದುಲ ರಹೀಮ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ:21-4-2004 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ಶ್ರೀಮತಿ ಅಜರನಬಿ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

ಜಿ. ಸಿದ್ದಲಿಂಗಪ್ಪ ಆಲೂರು

ಪಿ.ಆರ್. 818 ಕಾರ್ಮಿಕ ಪರಿಹಾರ ಆಯುಕ್ತರು, ಉಪ-ವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪೂರ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪೂರ ಇವರಲ್ಲಿ**

**ಪ್ರಕಟಣೆ**

**ಮರಣ ಪ್ರಕರಣ ಸಂಖ್ಯೆ: ಕಾಅಕೊ:ಕಾನಪ:60:2004 ದಿನಾಂಕ: 12ನೇ ಮೇ 2004**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

ಶ್ರೀಮತಿ ಮಹಾದೇವಿ ರಾಜಪ್ಪಾ ಬೋವಿ, ವಾಸ-ಕೇಸಾಪೂರ ತಾ-ಮುದ್ದೇಬಿಹಾಳ, ಜಿಲ್ಲೆ: ಬಿಜಾಪೂರ (ಹಾಗೂ ಇತರೆ 2 ಜನರು)

1. ಸಿ.ಎಂ. ಗಾಂಧಿ ಕನಸ್ಟ್ರಕ್ಷನ್ ಪ್ರೈ.ಲಿ. ಇಂಜನಿಯರ್ಸ್ ಮತ್ತು ಬಿಲ್ಡರ್ಸ್, ಆಶೀರ್ವಾದ ಬಿಲ್ಡಿಂಗ್, 16, 4ನೇ ಫ್ಲೋರ್ ವಿಠೋಬಾ ಟೆಂಪಲ್ ಸೀನ್ (ಡಬ್ಲ್ಯೂ) ಬಾಂಬೆ-400 022 (ಮಹಾರಾಷ್ಟ್ರ ರಾಜ್ಯ)
2. ನ್ಯೂ ಇಂಡಿಯಾ ಅಸ್ಯೂರೆನ್ಸ್ ಕಂ. ಲಿ., ಹಣಮಶೆಟ್ಟಿ ಬಿಲ್ಡಿಂಗ್, ಗುರುಕುಲ ರೋಡ್, ಬಿಜಾಪೂರ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ ರಾಜಪ್ಪಾ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ:23-4-2003 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ಶ್ರೀಮತಿ ಮಹಾದೇವಿ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

ಜಿ. ಸಿದ್ದಲಿಂಗಪ್ಪ ಆಲೂರು

ಪಿ.ಆರ್. 819 ಕಾರ್ಮಿಕ ಪರಿಹಾರ ಆಯುಕ್ತರು, ಉಪ-ವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪೂರ.

**ಪೊಲೀಸ್ ಇನ್ಸ್ ಪೆಕ್ಟರ್, ಕುಮಾರಸ್ವಾಮಿ ಲೇಔಟ್ ಪೊಲೀಸ್ ಠಾಣೆ, ಬೆಂಗಳೂರು - 560 078**

**ವಿಷಯ:** ವಾರಸುದಾರರು ಪತ್ತೆಯಾಗದೆ ಅಮಾನತ್ತುಪಡಿಸಿರುವ ದ್ವಿಚಕ್ರ ವಾಹನಗಳ ವಿವರ

**ಉಲ್ಲೇಖ:** ಪಿ.ಎಫ್. ನಂಬರ್ 140/01, 141/01, 207/02 ರಲ್ಲಿ

ಈ ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಘನ ಸನ್ನಿಧಿಯಲ್ಲಿ ಅರಿಕೆ ಮಾಡಿ ಕೊಳ್ಳುವುದೇನೆಂದರೆ ಕುಮಾರಸ್ವಾಮಿ ಲೇಔಟ್ ಪೊಲೀಸ್ ಠಾಣೆಯ ಸರಹದ್ದಿನಲ್ಲಿ ವಾರಸುದಾರರು ಪತ್ತೆಯಾಗದೆ ಇರುವ ಈ ಕೆಳಕಂಡ ದ್ವಿಚಕ್ರ ವಾಹನಗಳನ್ನು ಅಮಾನತ್ತುಪಡಿಸಿದ್ದು ಸದರಿ ವಾಹನಗಳ ವಾರಸುದಾರರ ಪತ್ತೆಗಾಗಿ ಎಲ್ಲಾ ಪ್ರಯತ್ನ ಮಾಡಿದ್ದು ಹಾಗೂ ಸುತ್ತೋಲೆ ಹೊರಡಿಸಿ ಬೆಂಗಳೂರು ನಗರದ ಎಲ್ಲಾ ಪೊಲೀಸ್ ಠಾಣೆಗೆ ಹಾಗೂ ಸಂಚಾರಿ ಪೊಲೀಸ್ ಠಾಣೆಗಳಿಗೆ ಕಳುಹಿಸಿದ್ದು ಸದರಿ ವಾಹನಗಳ ವಾರಸುದಾರರು ಪತ್ತೆಯಾಗಿರುವುದಿಲ್ಲ. ಆದುದರಿಂದ ಈ ಕೆಳಕಂಡ ವಾಹನಗಳ ವಿವರಗಳನ್ನು ಸಾರ್ವಜನಿಕರ ಗಮನಕ್ಕಾಗಿ ಈ ಮೂಲಕ ಪ್ರಕಟಿಸಲಾಗಿದೆ.

| SL. NO. | C. MISC NO. | P.F. NO. | VEHICLE | REG. NO. |
|---|---|---|---|---|
| 1 | 201/01 | 61/01 | LUNA MOPED | CAW 1813 |
| 2 | 140/01 | 39/01 | AUTO RICKSHAW | MED 9737 |
| 3 | 141/01 | 51/01 | VESPA S/C | MYV 955 |
| 4 | 207/02 | 55/02 | TVS 50 | KA 05-Y2248 |
| 5 | - | - | BAJAJ S/C | MEB 7347 |
| 6 | - | - | BAJAJ S/C | KA 25-H236 |
| 7 | - | - | TVS 50 | KA 05-J1739 |
| 8 | - | - | BAJAJ S/C | CKJ 4274 |

| SL. NO. | C. MISC NO. | P.F. NO. | VEHICLE | REG. NO. |
|---|---|---|---|---|
| 9 | - | - | TVS 50 | KA 05-S8513 |
| 10 | - | - | TVS 50 | KA 05-V974 |
| 11 | - | - | JAWA M/S | MER 7845 |
| 12 | - | - | YAMAHA M/C | KA 25-J1799 |
| 13 | - | - | KINETIC HONDA | KA 09-L8608 |
| 14 | - | - | BAJAJ S/C | MYV 3207 |

ಪಿ.ಆರ್. 820 ಪೊಲೀಸ್ ಇನ್ಸ್‌ಪೆಕ್ಟರ್, ಕುಮಾರಸ್ವಾಮಿ ಲೇಔಟ್ ಪೊಲೀಸ್ ಠಾಣೆ, ಬೆಂಗಳೂರು-560 078.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ**

**ಪ್ರಕರಣ ಸಂ:ಕಾನಪ:ಪ್ರ:F-CR/7/2004 ದಿನಾಂಕ: 24ನೇ ಮೇ 2004**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1. ಮಲ್ಲಮ್ಮ W/o ಲೇ. B.N. ನಿಂಗಪ್ಪ
2. ಗೀತಮ್ಮ D/o ಲೇ B.N. ನಿಂಗಪ್ಪ,
   ವಾಸ: ಚಿಕ್ಕಮಧುರೆ.

1. ಚಿತ್ರದುರ್ಗ ಸನ್‌ಫ್ಲವರ್ ಆಯಿಲ್ ಇಂಡಸ್ಟ್ರೀಸ್ ಬೆಂಗಳೂರು ರಸ್ತೆ, ಚಳ್ಳಕೆರೆ.
2. ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ., ದಾವಣಗೆರೆ.

**ಪ್ರಕಟಣೆ**

ಅರ್ಜಿದಾರರಾದ ಶ್ರೀ:ಶ್ರೀಮತಿ ಮಲ್ಲಮ್ಮ, ಗೀತಮ್ಮ ಇವರು, ತಾವು ಮೃತ B.N. ನಿಂಗಪ್ಪ ಇವರ ಹೆಂಡತಿ ಮತ್ತು ಮಗಳು ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ B.N. ನಿಂಗಪ್ಪ ಇವರು ಒಂದನೇ ಪ್ರತಿವಾದಿಗಳಾದ ಚಿತ್ರದುರ್ಗ ಸನ್ ಫ್ಲವರ್ ಆಯಿಲ್ ಇಂಡಸ್ಟ್ರೀಸ್ ಇವರಲ್ಲಿ ಸಹಾಯಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಬಂಧಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**

ಪಿ.ಆರ್. 821 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ**

**ಪ್ರಕರಣ ಸಂ:ಕಾನಪ:ಪ್ರ:F-10/2004 ದಿನಾಂಕ: 24ನೇ ಮೇ 2004**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1. ರತ್ನಮ್ಮ W/o ಲೇ. ಬಸವರಾಜಪ್ಪ
2. B. ರಾಜು S/o ಲೇ. ಬಸವರಾಜಪ್ಪ
3. B. ಅಣ್ಣಪ್ಪ S/o ಲೇ. ಬಸವರಾಜಪ್ಪ
4. B. ರಘುನಾಥ S/o ಲೇ. ಬಸವರಾಜಪ್ಪ
   **ವಾಸ:** ಚಿತ್ರದುರ್ಗ

1. C.T. ಜನಾರ್ಧನ ಲಾರಿ ಮಾಲೀಕರು ಚಿತ್ರದುರ್ಗ
2. ಯುನೈಟೆಡ್ ಇಂ. ಇನ್ ಕಂ. ಲಿ., ಚಿತ್ರದುರ್ಗ.

**ಪ್ರಕಟಣೆ**

ಅರ್ಜಿದಾರರಾದ ಶ್ರೀ:ಶ್ರೀಮತಿ ರತ್ನಮ್ಮ, B. ರಾಜು, B. ಅಣ್ಣಪ್ಪ, B. ರಘುನಾಥ ಇವರು, ತಾವು ಮೃತ ಟಿ. ಬಸವರಾಜಪ್ಪ ಇವರ ಹೆಂಡತಿ ಮತ್ತು ಮಕ್ಕಳು ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ T. ಬಸವರಾಜಪ್ಪ ಇವರು ಒಂದನೇ ಪ್ರತಿವಾದಿಗಳಾದ C.T. ಜನಾರ್ಧನ ಇವರಲ್ಲಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಬಂಧಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**

ಪಿ.ಆರ್. 822 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

**ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಹಳಿಯಾಳ ವಿಭಾಗ, ಹಳಿಯಾಳ ಇವರ ನ್ಯಾಯಾಲಯದ ಆದೇಶ**

**ಮುಟ್ಟುಗೋಲು ಆದೇಶ**

**ವಿಷಯ:** ಅನಧಿಕೃತವಾಗಿ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಕುರಿತು.

**ಉಲ್ಲೇಖ:** 1. ಈ ಕಛೇರಿಯಿಂದ ಅಧಿಸೂಚನೆ ಹೊರಡಿಸಿದ ದಿ: 17-03-2004.

2. ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಗೊಂಡ ದಿ: 25-03-2004.

ಅಕ್ರಮವಾಗಿ ಅರಣ್ಯ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಕುರಿತು ಕರ್ನಾಟಕ ಅರಣ್ಯ ಕಾಯ್ದೆ 1963ರ ಕಲಂ 17(ಎ) ದಿಂದ (ಜಿ)ವರೆಗೆ ಅನುಗುಣವಾಗಿ ಈ ನ್ಯಾಯ ಪ್ರಾಧಿಕಾರದಿಂದ ಸಂಬಂಧಿಸಿದ ವಾಹನ ಮಾಲಿಕರಿಗೆ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನದಲ್ಲಿ ಇದ್ದ ಅರಣ್ಯ ಉತ್ಪನ್ನ ತಮ್ಮದೆಂದು ಸಾಬೀತುಪಡಿಸಲು ಅಧಿಕೃತ ದಾಖಲೆ ವ ಪರ್ಮಿಟ್ ಈ ನ್ಯಾಯಾಲಯದ ಮುಂದೆ ಹಾಜರುಪಡಿಸಲು ಉಲ್ಲೇಖ ಪತ್ರ (1) ರನ್ವಯ ಅಧಿಸೂಚನೆ ಹೊರಡಿಸಲಾಗಿತ್ತು. ಅಧಿಸೂಚನೆಯನ್ನು ಕರ್ನಾಟಕ ರಾಜ್ಯ ಪತ್ರ ಹಾಗೂ ಸಂಬಂಧಿಸಿದ ಪತ್ರಿಕೆಗಳಲ್ಲಿ ಸಹ ಪ್ರಕಟಿಸಲು ಸೂಚನೆ ಹೊರಡಿಸಲಾಗಿತ್ತು. ಈ ಕೆಳಕಂಡ ವಾಹನ ಮತ್ತು ಅರಣ್ಯ ಉತ್ಪತ್ತಿ ಸಂಬಂಧದಲ್ಲಿ ಕರ್ನಾಟಕ ಅರಣ್ಯ ಕಾಯ್ದೆ 1963 ಕಲಂ 71 (ಡಿ) ಪ್ರಕಾರ ಯಾವುದೇ ಹಕ್ಕು ಬಾಧ್ಯತೆ ರುಜುವಾತುಪಡಿಸಲು ಅಪೇಕ್ಷಿಸಿದ ವ್ಯಕ್ತಿಯಿಂದ ಈ ಪ್ರಕಟಣೆ ಪ್ರಕಟಿಸಿದ 30 ದಿನಗಳೊಳಗಾಗಿ ಯಾವುದೇ ಅಹವಾಲು ಇಲ್ಲದಿದ್ದಲ್ಲಿ ಸರಕಾರದ ಪರವಾಗಿ ಈ ಕೆಳಕಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದೆಂದು ಸಹ ತಿಳಿಸಲಾಗಿತ್ತು. ಈ ಆದೇಶವನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ದಿ: 25-3-2004 ಪುಟ ಸಂ. 1049 ರಲ್ಲಿ ಪ್ರಕಟಿಸಲಾಗಿದೆ. ಹಾಗೂ ದಿ: 3-4-2004 ರಂದು ಶಿರಸಿಯ ಲೋಕಧ್ವನಿ ಮತ್ತು ದಿ: 3-4-2004 ರಂದು ಉತ್ತರ ಕನ್ನಡ ಕಾರವಾರ ಜಿಲ್ಲೆಯ ಅತ್ಯಧಿಕ ಪ್ರಸಾರವುಳ್ಳ ಕರಾವಳಿ ಮುಂಜಾವಿನಲ್ಲಿ ಸಹ ಪ್ರಕಟಣೆಗೊಂಡಿದೆ.

ಮೇಲ್ಕಂಡ ಪ್ರಕಟಣೆ ಪ್ರಕಟಗೊಂಡ 30 ದಿನಗಳ ಒಳಗಾಗಿ ಕರ್ನಾಟಕ ಅರಣ್ಯ ಕಾಯ್ದೆ 1963 ಕಲಂ 71(ಡಿ) ಪ್ರಕಾರ ಯಾವುದೇ ಅಹವಾಲುಗಳು ಮಾನ್ಯ ಜಿಲ್ಲಾ ನ್ಯಾಯಾಲಯದಿಂದ ಯಾವುದೇ ನಿರ್ದೇಶನ ಬಂದಿಲ್ಲವಾಗಿರುವುದರಿಂದಲೂ ಸದರಿ ವಾಹನ ವಾರಸುದಾರರು ಅರಣ್ಯ ಅಪರಾಧದಲ್ಲಿ ಭಾಗಿಯಾಗಿಲ್ಲವೆಂದು ರುಜುವಾತುಪಡಿಸಿಲ್ಲವಾದುದರಿಂದ ಅರಣ್ಯ ಅಪರಾಧದಲ್ಲಿ ಭಾಗಿಯಾಗಿರುತ್ತದೆಂದು ತಿಳಿದು ಬರುತ್ತದೆ. ಆದ್ದರಿಂದ ಕರ್ನಾಟಕ ಅರಣ್ಯ ಕಾಯ್ದೆ 1963 ಕಲಂ 71(ಎಫ್)ರ ಪ್ರಕಾರ ಈ ನ್ಯಾಯಾಲಯದ ದಿ: 17-3-2004ರ ಆದೇಶವನ್ನು ಸ್ಥಿರೀಕರಿಸಿ ಈ ಕೆಳಗಿನಂತೆ ಅಂತಿಮ ಆದೇಶ ಮಾಡಿದೆ.

**ಆದೇಶ**

ಈ ಕೆಳಕಂಡ ವಾಹನ ಮತ್ತು ಜಪ್ತಿ ಪಡಿಸಿದ ಅರಣ್ಯ ಉತ್ಪನ್ನವನ್ನು ಈ ಆದೇಶದ ಮೂಲಕ ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ. ಈ ಆದೇಶದನ್ವಯ ಈ ಕೆಳಕಂಡ ವಾಹನ ಮತ್ತು ಮುಟ್ಟುಗೋಲು ಪಡಿಸಿದ ಅರಣ್ಯ ಉತ್ಪನ್ನದ ಮೇಲೆ ಈ ದಿನದಿಂದ ಯಾವ ವ್ಯಕ್ತಿಗೂ ಯಾವುದೇ ರೀತಿಯ ಹಕ್ಕು (ಕರ್ನಾಟಕ ಸರಕಾರ ಹೊರತುಪಡಿಸಿ) ಇರುವುದಿಲ್ಲ ಎಂದು ಈ ಮೂಲಕ ಘೋಷಿಸಲಾಗಿದೆ.

| ಅ ನಂ. | ಎಫ್ ಆಯ್ ಆರ್ ನಂ ಹಾಗೂ ದಿನಾಂಕ | ವಾಹನ ನೊಂದಣಿ ಸಂಖ್ಯೆ | ವಾಹನದಲ್ಲಿ ವಶಪಡಿಸಿಕೊಂಡ ಅರಣ್ಯ ಉತ್ಪತ್ತಿ | ಷರಾ |
|---|---|---|---|---|
| 1) | 5/2003-04 ದಿ: 9-7-2003 | ಬಜಾಜ್ ಆಟೋ ರಿಕ್ಷಾ ಕೆ ಎ-31/858 | ಸಾಗ ನಗ5=0.286 | - |
| 2) | 2/2003-04 ದಿ: 7-11-2003 | ಟ್ರಕ್ ಸಿಎನ್ಎಲ್-6629 | ಬೆತ್ತ 2300 ಸಂಖ್ಯೆ | - |
| 3) | 2/2002-03 ದಿ: 12-8-2003 | ಬಜಾಜ್ ಎಂ-80 ನೊಂದಣಿ ಸಂಖ್ಯೆ ಇಲ್ಲ. | ಸಾಗ ಹಲಗೆ 4=0.20 | ನೊಂದಣಿ ಸಂಖ್ಯೆ ಇರುವುದಿಲ್ಲ. |
| 4) | 1/2001-02 | ಟ್ರಕ್ ನಂ. MYW-7605 | 17 ಸಾಗ ಗಿಡ | - |
| 5) | 1/2001-02 | ಟ್ರಕ್ ನಂ. CNG-4248 | 17 ಸಾಗ ಗಿಡ | - |

ದಿ: 24-5-2004 ರಂದು ಈ ನ್ಯಾಯಾಲಯದ ಮೊಹರಿನೊಂದಿಗೆ ಮತ್ತು ಸಹಿಯೊಂದಿಗೆ ಈ ಆದೇಶವನ್ನು ಬಿಡುಗಡೆ ಮಾಡಿರುತ್ತೇನೆ.

**ರಾಮಚಂದ್ರ**

ಪಿ.ಆರ್. 823 ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಹಳಿಯಾಳ ವಿಭಾಗ, ಹಳಿಯಾಳ.

**ಅಧಿಕಾರಿಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು, ಇವರ ನ್ಯಾಯಾಲಯದಲ್ಲಿ**

**ಆಲ್ದೂರು ಪೊಲೀಸ್ ಠಾಣೆ ಕ್ರೈಂ ಸಂಖ್ಯೆ. 172/2000 ದಿನಾಂಕ: 28/12/2000**

**ಅಬಕಾರಿ ಉಪ ನಿರೀಕ್ಷಕರು, ಚಿಕ್ಕಮಗಳೂರು ಉಪ ವಲಯ ಇವರ ಪ್ರ ವ ವ ಸಂಖ್ಯೆ. 62/2000-01 ದಿ.1/1/2001**

**ಉಪಸ್ಥಿತರು** : ಶ್ರೀ ಕೆ. ಭೀಮಪ್ಪ,

ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ)

ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

**ಫಿರ್ಯಾದಿದಾರರು** : ಆರಕ್ಷಕ ಉಪ ನಿರೀಕ್ಷಕರು
ಆಲ್ದೂರು ಪೊಲೀಸ್ ಠಾಣೆ.

**ಆಪಾದಿತರು** : ಮಂಜುನಾಥ ಬಿನ್ ವೆಂಕಟೇಶ ಮತ್ತು ಇತರರು

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 28.12.2000 ರಂದು ಆರಕ್ಷಕ ಉಪ ನಿರೀಕ್ಷಕರು, ಆಲ್ದೂರು ಪೊಲೀಸ್ ಠಾಣೆ ಇವರು ಆಲ್ದೂರು ಪೊಲೀಸ್ ಠಾಣೆಯ ಮುಂಭಾಗದಲ್ಲಿಯೇ ಲಾರಿ ಸಂಖ್ಯೆ. ಟಿ.ಎನ್.32 ವೈ. 0521 ಅನ್ನು ಅಕ್ರಮ ಮದ್ಯ ಸಾಗಾಣಿಕೆ ಸಂಬಂಧದಲ್ಲಿ ಅನುಮಾನಗೊಂಡು ತಡೆದು ನಿಲ್ಲಿಸಿ ತಪಾಸಣೆ ಮಾಡಲಾಗಿ ವಾಹನದಲ್ಲಿ ಒಟ್ಟು 5006.880 ಲೀಟರ್ ದೇಶಿಯ ಮದ್ಯವಿದ್ದು, ಸದರಿ ಮದ್ಯ ಸಾಗಾಣಿಕೆಗೆ ಸಂಬಂಧಿಸಿದಂತೆ ವಾಹನದಲ್ಲಿದ್ದ ವ್ಯಕ್ತಿಗಳಾದ ಮಂಜುನಾಥ ಬಿನ್ ವೆಂಕಟೇಶ ಮತ್ತು ಎಂ. ವಿನಯ್ ಕುಮಾರ ಇವರುಗಳು ಅಧಿಕೃತ ರಹದಾರಿ ಪತ್ರಗಳನ್ನಾಗಲೀ ಅಥವಾ ಸಾಗಾಣಿಕೆಗೆ ಸಂಬಂಧಪಟ್ಟ ದಾಖಲಾತಿಗಳನ್ನು ಹಾಜರುಪಡಿಸದೇ ಇದ್ದುದರಿಂದ, ತೆರಿಗೆ ರಹಿತವಾದುದೆಂದು ದೃಢಪಡಿಸಿಕೊಂಡು ಈ ಬಗ್ಗೆ ಸ್ಥಳದಲ್ಲಿ ಪಂಚರ ಸಮಕ್ಷಮ ಜರುಗಿಸಬೇಕಾದ ಕ್ರಮಗಳನ್ನು ಅನುಸರಿಸಿ ದೊರೆತ ಮದ್ಯವನ್ನು ವಾಹನದೊಂದಿಗೆ ಸರ್ಕಾರದ ವಶಕ್ಕೆ ಅಮಾನತ್ತುಪಡಿಸಿಕೊಂಡು ಠಾಣೆಯ ಕ್ರೈಂ ಸಂಖ್ಯೆ. 172/2000ರಲ್ಲಿ ಮೊಕದ್ದಮೆಯನ್ನು ದಾಖಲಿಸಿ, ಆರೋಪಿಯನ್ನು ದಸ್ತಗಿರಿಗೊಳಿಸಿ ಮುಂದಿನ ತನಿಖೆಗಾಗಿ ಅಬಕಾರಿ ಉಪ ನಿರೀಕ್ಷಕರು, ಚಿಕ್ಕ ಮಗಳೂರು ಉಪ ವಲಯ ಇವರಿಗೆ ಹಸ್ತಾಂತರಿಸಿದ ಮೇರೆಗೆ, ಸದರಿಯವರು ತನಿಖೆ ಮುಂದುವರೆಸಿ ಪ್ರ.ವ.ವ. ಸಂಖ್ಯೆ.62/2000-01 ದಿ. 1-01-2001ರಲ್ಲಿ ಮೊಕದ್ದಮೆಯನ್ನು ದಾಖಲಿಸಿ ನ್ಯಾಯಾಲಯಕ್ಕೆ ಮತ್ತು ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ತೆರಿಗೆ ರಹಿತ ಭಾರತೀಯ ಮದ್ಯಕ್ಕೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡುವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ. 43(ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಕೋರಿ ಪತ್ರ ಬರೆದು ಕ್ರಮ ಕೈಗೊಳ್ಳಲಾಯಿತು.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದಿಂಡಿಗಲ್ ಜಿಲ್ಲೆ, ತಮಿಳು ನಾಡು ರಾಜ್ಯ ಇವರು ದಿನಾಂಕ:8-11-2002ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ವಿಲ್ಲುಪುರಂ, ತಮಿಳು ನಾಡು ರಾಜ್ಯ ಇವರಿಗೆ ಪತ್ರ ಪ್ರತಿಯನ್ನು ಸಲ್ಲಿಸಿ, ಸದರಿಯವರಿಂದ "ಬಿ" ಎಕ್ಸ್ಟ್ರಾಕ್ಟ್ ಅನ್ನು ಪಡೆಯಲು ತಿಳಿಸಿರುತ್ತಾರೆ. ಸದರಿಯವರು ದಿನಾಂಕ:13-1-2003 ರಂದು ನೀಡಿರುವ ವರದಿಯಲ್ಲಿ ವಾಹನಕ್ಕೆ ಸಂಬಂಧಿಸಿದ ನೋ ಅಬ್ಜೆಕ್ಷನ್ ಸರ್ಟಿಫಿಕೇಟ್ ಅನ್ನು ದಿನಾಂಕ: 4-5-1998ರಲ್ಲಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು, ಕರ್ನಾಟಕ ರಾಜ್ಯ ಇವರಿಗೆ ಕಳುಹಿಸಿ ಕೊಟ್ಟಿರುವುದಾಗಿ ತಿಳಿಸಿರುವುದರಿಂದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು ದಕ್ಷಿಣ, ಉತ್ತರ, ಪೂರ್ವ, ಪಶ್ಚಿಮ ಮತ್ತು ಕೇಂದ್ರ ಇವರುಗಳಿಗೆ "ಬಿ" ಎಕ್ಸ್ಟ್ರಾಕ್ಟ್ ಕೋರಿ ಪತ್ರಗಳನ್ನು ಬರೆದಿದ್ದು, ಸದರಿಯವರುಗಳಿಂದ ವಾಹನ ಸಂಖ್ಯೆ. ಟಿ.ಎನ್.32 ವೈ. 0521 (ಲಾರಿ) ವಾಹನವು ಕಛೇರಿಗಳಿಗೆ ಇದುವರೆವಿಗೂ ವಿಳಾಸ ಬದಲಾವಣೆಯ ಮೂಲಕವಾಗಲೀ ಅಥವಾ ವಾಹನ ಮಾಲೀಕತ್ವ ವರ್ಗಾವಣೆ ಮೂಲಕವಾಗಲೀ ಸೇರ್ಪಡೆಗೊಂಡಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಸದರಿ ಪ್ರಕರಣದಲ್ಲಿ ಜಪ್ತಾಗಿರುವ ವಾಹನಕ್ಕೆ ದಿನಾಂಕ:22-2-2001 ರಂದು ಬಿ.ಎನ್. ನಟರಾಜ್ ಬಿನ್ ನಂಜುಂಡೇಗೌಡ, ನಂ.51-A, 2ನೇ ಮೇನ್. ಪ್ರಶಾಂತ ನಗರ ಹೌಸಿಂಗ್ ಬೋರ್ಡ್ ಕಾಲೋನಿ ಹತ್ತಿರ, ಬೆಂಗಳೂರು-27, ಇವರ ಪರ ವಕೀಲರಾದ ಹೆಚ್.ಎಸ್. ಶಶಿಧರ್, ಗಾಂಧಿನಗರ, ತುಮಕೂರು, ಇವರ ಮೂಲಕ ಜಪ್ತಾಗಿರುವ ವಾಹನವನ್ನು ಇಲಾಖೆ ಮೂಲಕ ಇತ್ಯರ್ಥ ಮಾಡಿಸಿ ಕೊಡಬೇಕೆಂದು ಮನವಿ ಸಲ್ಲಿಸಿದ್ದು, ಈವರೆವಿಗೂ ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದರಿಂದ ಸದರಿಯವರುಗಳಿಗೆ ನೊಂದಾಯಿತ ಅಂಚೆ ಮೂಲಕ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ. 43 (ಬಿ) ಅಡಿಯಲ್ಲಿ ನೋಟೀಸ್‌ಗಳನ್ನು ನೀಡಿದ್ದು, ದಿನಾಂಕ: 24-11-2003 ಮತ್ತು ದಿನಾಂಕ: 20-12-2003 ರಂದು "ನೋ ಸಚ್ ಅಡ್ರೆಸ್ ಇನ್ ದಿಸ್ ರಿರ್ಟನ್ಡ್ ಟು ಸೆಂಡರ್" ಎಂಬ ಷರಾದೊಂದಿಗೆ ಪ್ರಾಧಿಕಾರಕ್ಕೆ ಮರಳಿ ಬಂದಿರುತ್ತದೆ.

ವಿಜಯ ಕರ್ನಾಟಕ ಪತ್ರಿಕೆಯ ಬೆಂಗಳೂರು ಆವೃತ್ತಿ ವಿಭಾಗದ ಪತ್ರಿಕೆಯಲ್ಲಿ ದಿನಾಂಕ: 9-1-2004ರಂದು ಜಪ್ತಾಗಿರುವ ವಾಹನಕ್ಕೆ ಸಂಬಂಧಪಟ್ಟ ಮಾಲೀಕರ ತಿಳುವಳಿಕೆಗಾಗಿ ಪತ್ರಿಕಾ ಪ್ರಕಟಣೆಯನ್ನು ಹೊರಡಿಸಿದ್ದು, ಸದರಿ ದಿನಾಂಕದಿಂದ 30 ದಿನಗಳೊಳಗಾಗಿ ಪ್ರಾಧಿಕಾರದ ಮುಂದೆ ಅಧಿಕೃತ ದಾಖಲಾತಿಗಳೊಂದಿಗೆ ಲಿಖಿತ ಮನವಿ ಬಾರದೆ ಇದ್ದಲ್ಲಿ, ಪ್ರಕರಣದಲ್ಲಿ ಏಕಪಕ್ಷೀಯವಾಗಿ ನಿರ್ಣಯ ಕೈಗೊಂಡು ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದೆಂದು ತಿಳಿಸಲಾಗಿರುತ್ತದೆ.

ಮೊಕದ್ದಮೆಗೆ ಸಂಬಂಧಪಟ್ಟ ದಾಖಲಾತಿಗಳನ್ನು ಪರಿಶೀಲಿಸಲಾಗಿ, ಸದರಿ ಪ್ರಕರಣವು ಮೂರು ವರ್ಷ, 4 ತಿಂಗಳಿಗೂ ಮೇಲ್ಪಟ್ಟಿದ್ದು, ವಶಪಡಿಸಿಕೊಂಡ 5006.395 ಲೀಟರ್ ಮದ್ಯದಲ್ಲಿ ರಾಸಾಯನಿಕ ಪರೀಕ್ಷೆಗೆ ತೆಗೆದುಳಿದ 5005.395 ಲೀಟರ್ ಮದ್ಯವು ಈಗಾಗಲೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಿದ್ದು, ವಶಪಡಿಸಿಕೊಂಡ ವಾಹನದ ಮುಟ್ಟಗೋಲಿನ ನಡುವಳಿಗಳು ಪೂರ್ಣಗೊಂಡಿದ್ದು, ಸದರಿ 30 ದಿನಗಳ ಅವಧಿಯಲ್ಲಿ ಪ್ರಾಧಿಕಾರದ ಮುಂದೆ ಬಂದು ಯಾರು ಹಕ್ಕು ಸಾಧಿಸಿರುವುದಿಲ್ಲ. ವಾಹನವು ಇಲಾಖೆಯ ವಶದಲ್ಲಿದ್ದು, ತಟಸ್ಥ ಸ್ಥಿತಿಯಲ್ಲಿ ಹಾಗೆಯೇ ಬಿಟ್ಟಲ್ಲಿ ಪ್ರಕೃತಿಯ ವೈಪರೀತ್ಯಗಳಿಗನುಗುಣವಾಗಿ ಸರ್ಕಾರಕ್ಕೆ ಬರಬಹುದಾದ ರಾಜಸ್ವಕ್ಕೆ ಧಕ್ಕೆ ಉಂಟಾಗುವ ಸಂಭವವಿರುವುದರಿಂದ ಮೊಕದ್ದಮೆಯ ಶೀಘ್ರ ವಿಲೇವಾರಿಯ ದೃಷ್ಟಿ, ಸರ್ಕಾರದ ಆದಾಯದ ದೃಷ್ಟಿಯಿಂದ ಕರ್ನಾಟಕ ಅಬಕಾರಿ ಕಾಯ್ದೆ ಕಲಂ, 43 (ಸಿ) ಅಡಿಯಲ್ಲಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

## ಆದೇಶ

### ಡಿ.ಟಿ.ಸಿ.ಆರ್. ಸಂಖ್ಯೆ. 337/2000-01, ದಿನಾಂಕ: 1ನೇ ಜೂನ್ 2004

ಶ್ರೀ ಕೆ. ಭೀಮಪ್ಪ, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, (ಪ್ರಭಾರ) ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು, ಆದ ನಾನು, ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ.43 (ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ. 43 (ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಸಂಖ್ಯೆ. ಟಿಎನ್. 32 ವೈ. 0521 (ಲಾರಿ) ಅನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ. 43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಸದರಿ ಪ್ರಕರಣದಲ್ಲಿರುವ ಆರೋಪಿಗಳ ವಿರುದ್ಧ ನ್ಯಾಯಾಲಯಕ್ಕೆ ಆರೋಪಪಟ್ಟಿ ಸಲ್ಲಿಸಿ ಪ್ರಾಧಿಕಾರಕ್ಕೆ ವರದಿ ಸಲ್ಲಿಸುವಂತೆ ಅಬಕಾರಿ ನಿರೀಕ್ಷಕರು, ಚಿಕ್ಕಮಗಳೂರು ವಲಯ ಇವರಿಗೆ ಸೂಚಿಸಿದೆ.

ಈ ಆದೇಶವನ್ನು ಇಂದು ಅಂದರೆ 1ನೇ ಜೂನ್ 2004 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಕಂಪ್ಯೂಟರ್‌ನಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಗಿತ್ತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿರುತ್ತದೆ.

ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ)
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

ಪಿ.ಆರ್. 824

### ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಕುಂದಗೋಳ ತಾಲ್ಲೂಕು ಧಾರವಾಡ ಜಿಲ್ಲೆ.

## ಅಧಿಸೂಚನೆ

### ಸಂ: ತಾಸಕಅ/ಕ.ಮಾ.ಹ.ಅ/2000-02/ಸಿ.ಆರ್/03-04/39

**ವಿಷಯ:** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ಹಾಗೂ 2002ರ ಅನುಷ್ಠಾನದ ಬಗ್ಗೆ.

**ಉಲ್ಲೇಖ:** ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಆಸುಇ-56: ಯೋಮನ-02(1) ದಿನಾಂಕ: 18-07-2002.

ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ, 2000 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2002 ಈಗಾಗಲೇ ಜಾರಿಗೆ ಬಂದಿದ್ದು, ಸದರಿ ಅಧಿನಿಯಮದ ರೀತ್ಯಾ ಎಲ್ಲಾ ಸಾರ್ವಜನಿಕ ಪ್ರಾಧಿಕಾರಗಳು (ಕಛೇರಿಗಳು) ಅಧಿನಿಯಮದ ಸೆಕ್ಷನ್ 2(ಎ) ಅಡಿಯಲ್ಲಿ ವ್ಯಾಖ್ಯಾನಿಸಿರುವಂತೆ, ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳನ್ನು ನೇಮಿಸಬೇಕಾಗಿರುತ್ತದೆ. ಅದರಂತೆ, ತಾಲ್ಲೂಕು ಮಟ್ಟದ ಹಂತದಲ್ಲಿ ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳಾಗಿ ಈ ಕೆಳಗಿನಂತೆ ನೇಮಿಸಲಾಗಿದೆ.

| | ಸಕ್ಷಮ ಪ್ರಾಧಿಕಾರ | ಅಪೀಲು ಪ್ರಾಧಿಕಾರ |
|---|---|---|
| ತಾಲ್ಲೂಕು ಮಟ್ಟದಲ್ಲಿ | ಕಛೇರಿ ಅಧೀಕ್ಷಕರು | ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು |

ಸರ್ಕಾರದ ಅಧಿನಿಯಮದ ಸೆಕ್ಷನ್ 3 (ಬಿ) ಅಡಿಯಲ್ಲಿ ನಿಗದಿಪಡಿಸಿದಂತೆ, ಈ ಕೆಳಗೆ ತಿಳಿಸಿರುವ 4 ಶೀರ್ಷಿಕೆಗಳಲ್ಲಿ ತಿಳಿಸಿರುವ ವಿವರಗಳನ್ನು ಸಾರ್ವಜನಿಕ ಪ್ರಕಟಣೆಗಾಗಿ ಈ ಕೆಳಗಿನಂತೆ ತಿಳಿಯಪಡಿಸಿದೆ.

**1. ಇಲಾಖೆಯ ಸಂಘಟನೆ, ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು:**

ತಾಲ್ಲೂಕು ಹಂತದಲ್ಲಿ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯು ತಾಲ್ಲೂಕು ಪಂಚಾಯತ್‌ನ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು ಕಛೇರಿಯ ಮುಖ್ಯಸ್ಥರಾಗಿರುತ್ತಾರೆ.

ಇವರಿಗೆ ಸಹಕರಿಸಲು ಸದರಿ ಕಛೇರಿಯಲ್ಲಿ ಈ ಕೆಳಗಿನಂತೆ ಪೂರಕ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

1. ಕಛೇರಿ ಅಧೀಕ್ಷಕರು - 1 ಹುದ್ದೆ
2. ಪ್ರಥಮ ದರ್ಜೆ ಸಹಾಯಕರು - 1 ಹುದ್ದೆ
3. ದ್ವಿತೀಯ ದರ್ಜೆ ಸಹಾಯಕರು - 1 ಹುದ್ದೆ
4. ಬೆರಳಚ್ಚುಗಾರರು - 1 ಹುದ್ದೆ
5. ಗ್ರೂಪ್ 'ಡಿ' ನೌಕರರು - 1 ಹುದ್ದೆ

**ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಾರ್ಯಾಲಯದ ಅಧೀನದಡಿಯಲ್ಲಿ ಬರುವ ಸಂಸ್ಥೆಗಳ ಹೆಸರು ಮತ್ತು ವಿವರ**

| | ಸಂಸ್ಥೆಗಳ ಹೆಸರು | ಮಂಜೂರಾತಿ ಸಂಖ್ಯೆ |
|---|---|---|
| 1. | ಮೆಟ್ರಿಕ್ ಪೂರ್ವ ಬಾಲಕರ ವಸತಿ ನಿಲಯ, ಕುಂದಗೋಳ | 50 |
| 2. | ಪರಿಶಿಷ್ಟ ವರ್ಗದ ಬಾಲಕರ ವಸತಿ ನಿಲಯ, ಕುಂದಗೋಳ | 25 |
| 3. | ಪರಿಶಿಷ್ಟ ವರ್ಗದ ವಸತಿ ಶಾಲೆ, ಹರ್ಲಾಪೂರ | 50 |

ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದಲ್ಲಿ ಪ.ಜಾತಿ/ಪ. ವರ್ಗಗಳ ಸರ್ವತೋಮುಖ ಅಭಿವೃದ್ಧಿಗಾಗಿ ಈ ಕೆಳಕಂಡ ಹಲವಾರು ಶೈಕ್ಷಣಿಕ ಮತ್ತು ಆರ್ಥಿಕ ನೆರವಿನ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

1) ಕಾನೂನು ಪದವೀಧರರಿಗೆ ಧನಸಹಾಯ.
2) ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ಶಿಷ್ಯವೇತನ.
3) ಎಸ್.ಎಸ್.ಎಲ್.ಸಿ. ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ಪುರಸ್ಕಾರ ಬಹುಮಾನ.

4) ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ.
5) ಪ್ರತಿಭಾ ವಿದ್ಯಾರ್ಥಿವೇತನ.
6) ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳು.
7) ಪರಿಶಿಷ್ಟ ವರ್ಗದ ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ.
8) ಅನೈರ್ಮಲ್ಯ ವೃತ್ತಿಗಳಲ್ಲಿ ತೊಡಗಿರುವ ಪೋಷಕರ ಮಕ್ಕಳಿಗೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ.
9) 1 ರಿಂದ 4ನೇ ತರಗತಿಯ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ.
10) ಅಸ್ಪೃಶ್ಯತಾ ನಿವಾರಣೆ.
11) ದೌರ್ಜನ್ಯಕ್ಕೆ ಒಳಪಟ್ಟ ಪರಿಶಿಷ್ಟ ಜಾತಿಯವರಿಗೆ ಪರಿಹಾರ.
12) ಜಾತಿ ಪರಿಶೀಲನೆ.
13) ಅಂಬೇಡ್ಕರ್ ವಸತಿ ಯೋಜನೆ.
14) ಆಶ್ರಯ ವಸತಿ ಯೋಜನೆ.
15) ವಿಶೇಷ ಘಟಕ ಯೋಜನೆ.
16) ಮೆಟ್ರಿಕ್ ನಂತರದ ಪರೀಕ್ಷೆಗಳಲ್ಲಿ ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ಪುರಸ್ಕಾರ ಬಹುಮಾನ.
17) 6 ರಿಂದ 7 ಹಾಗೂ 8 ರಿಂದ 10 ವರ್ಗದ ಪ.ಜಾ./ಪ. ವರ್ಗ ಹೆಣ್ಣು ಮಕ್ಕಳಿಗೆ ಪ್ರೋತ್ಸಾಹ ಧನ.

**2) ಅಧಿಕಾರಿಗಳು ಮತ್ತು ನೌಕರರ ಅಧಿಕಾರಿಗಳು ಮತ್ತು ಕರ್ತವ್ಯಗಳು ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯವಿಧಾನ.**

ಮೇಲೆ ವಿವರಿಸಿರುವಂತೆ, ಶೀರ್ಷಿಕೆ (1)ರಲ್ಲಿ ತಿಳಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಎಲ್ಲಾ ವಿಷಯಗಳ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರವು ತಾಲ್ಲೂಕ ಮಟ್ಟದಲ್ಲಿ ಸಂಬಂಧಿಸಿದ ತಾಲ್ಲೂಕು ಪಂಚಾಯತ್‌ನ ಕಾರ್ಯ ನಿರ್ವಾಹಕ ಅಧಿಕಾರಿಗಳಿಗೆ ಇರುತ್ತದೆ.

ಅಧಿಕಾರಿಗಳ ಕರ್ತವ್ಯಗಳು:-

ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು:- ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು ನಿರ್ವಹಿಸುವ ಕರ್ತವ್ಯಗಳು

**JOB CHART OF TALUK SOCIAL WELFARE OFFICERS**
**[G.O. No. SWL.293.SET.87 dated: 19-09-1987]**

**BASIC FUNCTIONS:-**

1. To work as liaison and implementing/Executive Officer for the welfare of SC/STs in the taluk.
2. To tour not less than 15 days with 10 night halts and they must specifically visit harijan basthis.
3. To prepare detailed annual action plan of various programmes for the welfare of SC/STs the taluk and submit to the Deputy Commissioners and District Social Welfare Officer of the districts for sanction of grants.
4. To supervise the work of head of Social Welfare Institutions in the taluk including table inspection of officer staff.
5. To send monthly, quarterly, half yearly and annual progress reports.
6. To send monthly expenditure statements and cheque account statements to the District Social Welfare Officer.
7. To conduct survery of SC/STs children attending schools and maintain basic statistics of the taluk.

**EDUCATION:-**

8. To sanction prematric and postmatric scholarships to SC/STs students studying from V to X std.
9. To maintain all Social Welfare institutions in the taluk and supervise all Grant in aid hostels both pre-matric and post matric.
10. To disburse award of prize money to the SSLC students who secure I class in First attempt.
11. To ensure proper distribution of free uniforms textbooks and other education's aids to SC/STs School going children.
12. To co-operate with Adult Education, Youth Services and Co-operative Departments for starting their agencies in harijan basthis.
13. To supervise proper distribution of scholarship in the institutions including establishment of Book Banks.

**HEALTH AND HOUSING:-**

14. To supervise implement construction of hostel buildings, community center building, kalyan mandira, school buildings.

ಸಮಯದಲ್ಲಿ ಒಂದು ಲಾರಿ ನಂಬರ್:ಸಿ.ಎನ್.ಒ.8310 ಈ ವಾಹನವನ್ನು ಬೆಂಗಳೂರು ಕಡೆಯಿಂದ ವಿಜಾಪೂರ ಕಡೆ ಬಂದಿದ್ದನ್ನು ನಿಲ್ಲಿಸಿ, ಸದರಿ ವಾಹನವನ್ನು ಪರಿಶೀಲಿಸಲಾಗಿ ಈ ಕೆಳಕಂಡ ಮದ್ಯ ತುಂಬಿದ ಪೆಟ್ಟಿಗೆಗಳು ಕಂಡು ಬಂದಿದ್ದು ಇರುತ್ತದೆ.

1) ಓಲ್ಡ್ ಟಾವರಿನ್ ವಿಸ್ಕಿ 50 ರಟ್ಟಿನ ಪೆಟ್ಟಿಗೆಗಳಲ್ಲಿ 750 ಮಿಲಿಯ 600 ಬಾಟ್ಲಿಗಳು
2) ಓಲ್ಡ್ ಟಾವರಿನ್ ವಿಸ್ಕಿನ 283 ರಟ್ಟಿನ ಪೆಟ್ಟಿಗೆಗಳಲ್ಲಿ 180 ಮಿಲಿಯ 13584
3) ಮೊಗಲ್ ಮೊನಾರ್ಕ್ ವಿಸ್ಕಿ 15 ರಟ್ಟಿನ ಪೆಟ್ಟಿಗೆಗಳಲ್ಲಿ 180 ಮಿಲಿಯ 360 ಬಾಟ್ಲಿಗಳು.
4) ಮೊಗಲ್ ಮೊನಾರ್ಕ್ ವಿಸ್ಕಿ 15 ರಟ್ಟಿನ ಪೆಟ್ಟಿಗೆಗಳಲ್ಲಿ 180 ಮಿಲಿಯ 720 ಬಾಟ್ಲಿಗಳು.
5) ಡಿ.ಎಸ್.ಪಿ. ವಿಸ್ಕಿ 25 ರಟ್ಟಿನ ಪೆಟ್ಟಿಗೆಗಳಲ್ಲಿ 750 ಮಿಲಿಯ ಪ್ರಮಾಣದ 300 ಬಾಟ್ಲಿಗಳು.
6) ಡಿ.ಎಸ್.ಪಿ. ವಿಸ್ಕಿ 20 ರಟ್ಟಿನ ಪೆಟ್ಟಿಗೆಗಳಲ್ಲಿ 375 ಮಿಲಿಯ 480 ಬಾಟ್ಲಿಗಳು.
7) ಡಿ.ಎಸ್.ಪಿ. ವಿಸ್ಕಿ 55 ರಟ್ಟಿನ ಪೆಟ್ಟಿಗೆಗಳಲ್ಲಿ 180 ಮಿಲಿ ಪ್ರಮಾಣದ 2640 ಬಾಟ್ಲಿಗಳು
8) ರಾಯಲ್ ಚಾಲೆಂಜ್ ವಿಸ್ಕಿ 10 ರಟ್ಟಿನ ಪೆಟ್ಟಿಗೆಗಳಲ್ಲಿ 750 ಮಿಲಿಯ 120 ಬಾಟ್ಲಿಗಳು.
9) ಡಿ.ಎಸ್.ಪಿ. ಬ್ಲ್ಯಾಕ್ ವಿಸ್ಕಿ 10 ರಟ್ಟಿನ ಪೆಟ್ಟಿಗೆಗಳಲ್ಲಿ 750 ಮಿಲಿಯ 120 ಬಾಟ್ಲಿಗಳು.
10) ಡಿ.ಎಸ್.ಪಿ.ವಿಸ್ಕಿ 5 ರಟ್ಟಿನ ಪೆಟ್ಟಿಗೆಗಳಲ್ಲಿ 375 ಮಿಲಿಯ 120 ಬಾಟ್ಲಿಗಳು.
11) ಡಿ.ಎಸ್.ಪಿ.ಬ್ಲ್ಯಾಕ್ ವಿಸ್ಕಿ 10 ರಟ್ಟಿನ ಪೆಟ್ಟಿಗೆಗಳಲ್ಲಿ 180 ಮಿಲಿಯ 480 ಬಾಟ್ಲಿಗಳು (4351.320 ಲೀಟರ್ ಮದ್ಯ)

ಇವುಗಳು ಸದರಿ ವಾಹನದಲ್ಲಿ ಸಿಕ್ಕಿದ್ದು ಅವುಗಳ ಬಗ್ಗೆ ವಾಹನದ ಚಾಲಕನಾದ ಪುಟ್ಟಸ್ವಾಮಿ ತಂದಿ ಚವಡೇಗೌಡ, ಸಾ:ಚಾಮರಾಜಪೇಟೆ ಬೆಂಗಳೂರು ಇವನಿಗೆ ವಿಚಾರಿಸಿದಾಗ ಅವುಗಳ ಬಗ್ಗೆ ಯಾವುದೇ ರಹದಾರಿ ಪತ್ರ ವಗೈರೆ ಇರುವುದಿಲ್ಲವೆಂದು ಹೇಳಿದ್ದರಿಂದ ಸದರಿ ವಾಹನವನ್ನು ಅದರಲ್ಲಿ ಸಿಕ್ಕಂಥ ಮೇಲೆ ವಿವರಿಸಿದ ದೇಶಿಯ ಮದ್ಯವನ್ನು ಪಂಚಾಯತ್‌ದಾರರ ಸಮಕ್ಷಮ ಪಂಚನಾಮ ತಯಾರಿಸಿ, ಜಪ್ತಿ ಮಾಡಿಕೊಂಡು ವಾಹನ ಚಾಲಕನನ್ನು ಬಂಧಿಸಿ ಸಂಬಂಧಪಟ್ಟ ವಲಯದ ಅಧಿಕಾರಿಗಳಿಗೆ ಫಿರ್ಯಾದಿ ನೀಡಿ ಜಪ್ತಾದ ವಸ್ತುಗಳನ್ನು ಹಾಗೂ ಕಾಗದ ಪತ್ರಗಳನ್ನು ಮುಂದಿನ ಕ್ರಮಕ್ಕಾಗಿ ಅಬಕಾರಿ ಉಪ ನಿರೀಕ್ಷಕರಾದ ಮಲ್ಲಪ್ಪ ಭೀಮಪ್ಪ ಹಳ್ಳದಮನಿ, ಇವರಿಗೆ ಒಪ್ಪಿಸಿದ್ದು ಇರುತ್ತದೆ. ಮತ್ತು ಆರೋಪಿತರನ್ನು ಸಂಬಂಧಿಸಿದ ನ್ಯಾಯಾಲಯದಲ್ಲಿ ಹಾಜರುಪಡಿಸಿರುತ್ತಾರೆ. ಮತ್ತು ಇವರು ಅಬಕಾರಿ ಗುನ್ಹೆ ನಂ:27:2002-03, ದಿ:13-4-2003 ರಂದು ದಾಖಲಿಸಿಕೊಂಡಿದ್ದು ಇರುತ್ತದೆ. ಸದರಿ ಪ್ರಕರಣಕ್ಕೆ ಸಂಬಂಧಿಸಿದಂತೆ ವಶಪಪಡಿಸಿಕೊಂಡ ದೇಶಿಯ ಮದ್ಯ ಹಾಗೂ ವಾಹನವನ್ನು ಅದೇ ದಿವಸ ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಉಪ ಆಯುಕ್ತರು ವಿಜಾಪೂರ ರವರಿಗೆ ವರದಿ ಮಾಡಿದ್ದು ಇರುತ್ತದೆ.

ಈ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅಬಕಾರಿ ಕಾಯ್ದೆ ಕಲಂ 43 ರ ಅಡಿಯಲ್ಲಿ ಮುಂದಿನ ಕ್ರಮವನ್ನು ಜರುಗಿಸಿದ್ದು ಇರುತ್ತದೆ.

ವಾಹನದ ಮಾಲೀಕರ ಬಗ್ಗೆ ತಪಾಸಣೆ ಮಾಡಲಾಗಿದ್ದು ಸದರಿ ಮಾಲೀಕರು ಯಾರು ಇರುತ್ತಾರೆ, ಎಂದು ತಿಳಿದು ಬಂದಿರುವುದಿಲ್ಲ ಎಂದು ಶ್ರೀ ಎಸ್.ಎಂ. ಹುದ್ದಾರ, ಅಬಕಾರಿ ರಕ್ಷಕ ಇವರು ಅಬಕಾರಿ ಉಪ ನಿರೀಕ್ಷಕರಿಗೆ ವರದಿ ಮಾಡಿದ್ದು ಇರುತ್ತದೆ. ಅದು ಅಲ್ಲದೇ ದಿನಾಂಕ 8-8-2003 ರಂದು ಆರೋಪಿತನಿಗೆ ಪೋಸ್ಟ್ ಮುಖಾಂತರ ನೋಟೀಸ್ ಜಾರಿ ಮಾಡಿದ್ದು ಸದರಿಯವರಿಗೆ ಜಾರಿಯಾಗದೇ ವಾಪಸ್ಸು ಬಂದಿದ್ದು ಇರುತ್ತದೆ. ನಂತರ ದಿನಾಂಕ 8-1-2004 ರಂದು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲಾಗಿದ್ದು ಇರುತ್ತದೆ. ಆದರೂ ಕೂಡಾ 11-5-2004 ರವರೆಗೆ ಯಾರು ಈ ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನದ ಬಗ್ಗೆ ಬಿಡುಗಡೆ ಕುರಿತು ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಆದ್ದರಿಂದ ಸದರಿ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳುವ ಕುರಿತು ಮುಂದಿನ ವಿಚಾರಣೆಯನ್ನು ಕೈಕೊಂಡಿದ್ದು ಇರುತ್ತದೆ;

ಫಿರ್ಯಾದಿ ಪರವಾಗಿ ಒಟ್ಟು ಮೂರು (3) ಸಾಕ್ಷಿದಾರರನ್ನು ಪಿ.ಡಬ್ಲ್ಯು-1 ರಿಂದ 3 ರಂತೆ ಸಾಕ್ಷಿ ವಿಚಾರಣೆ ಮಾಡಿ ಏಳು (7) ದಾಖಲಾತಿಗಳನ್ನು ನಿಶಾನೆ ಪಿ-1 ರಿಂದ 7 ಹಾಗೂ 16, ಮುದ್ದೇಮಾಲುಗಳನ್ನು ಎಂ.ಒ.-1 ರಿಂದ 16 ರಂತೆ ಗುರುತಿಸಿಕೊಂಡಿದ್ದು ಇರುತ್ತದೆ.

ಪಿ.ಡಬ್ಲ್ಯು-1 ರವರು ಈ ನ್ಯಾಯಾಲಯದ ಮುಂದೆ ಸಾಕ್ಷಿ ನೀಡಿದ್ದು ಅದರ ಪ್ರಕಾರ ಸದರಿ ಪಿ.ಡಬ್ಲ್ಯು-1 ರವರು ದಿನಾಂಕ 13-4-2003 ರಂದು ಮಧ್ಯಾಹ್ನ 3-00 ಗಂಟೆಯ ಸುಮಾರಿಗೆ ವಿಜಾಪೂರದಿಂದ ಜಮಖಂಡಿಗೆ ಹೋಗುವ ರಸ್ತೆಯಲ್ಲಿ ಸ್ಮಶಾನದ ಹತ್ತಿರ ಆರೋಪಿ ಪುಟ್ಟಸ್ವಾಮಿ ತಂದಿ ಚವಡೇಗೌಡ, ಇವರು ನಡೆಸುತ್ತಿದ್ದ ಅಶೋಕ ಲೇಲ್ಯಾಂಡ್ ಲಾರಿ ನಂಬರ್:ಸಿ.ಎನ್.ಒ. 8310 ನೇದ್ದನ್ನು ತಡೆದು ನಿಲ್ಲಿಸಿ 1) ಓಲ್ಡ್ ಟಾವರಿನ್ ವಿಸ್ಕಿಯ 50 ರಟ್ಟಿನ ಪೆಟ್ಟಿಗೆಗಳಲ್ಲಿ 750 ಮಿಲಿಯ 600 ಬಾಟ್ಲಿಗಳು 2) ಓಲ್ಡ್ ಟಾವರಿನ್ ವಿಸ್ಕಿ 283 ರಟ್ಟಿನ ಪೆಟ್ಟಿಗೆಗಳಲ್ಲಿ 180 ಮಿಲಿಯ 13584 ಬಾಟ್ಲಿಗಳು 3) ಮೊಗಲ್ ಮೊನಾರ್ಕ ವಿಸ್ಕಿಯ 15 ರಟ್ಟಿನ ಪೆಟ್ಟಿಗೆಗಳಲ್ಲಿ 375 ಮಿಲಿಯ 360 ಬಾಟ್ಲಿಗಳು 4) ಮೊಗಲ್ ಮೊನಾರ್ಕ ವಿಸ್ಕಿ 15 ರಟ್ಟಿನ ಪೆಟ್ಟಿಗೆಗಳಲ್ಲಿ 180 ಮಿಲಿಯ 720 ಬಾಟ್ಲಿಗಳು 5) ಡಿ.ಎಸ್.ಪಿ. ವಿಸ್ಕಿ 25 ರಟ್ಟಿನ ಪೆಟ್ಟಿಗೆಗಳಲ್ಲಿ 750 ಮಿಲಿಯ ಪ್ರಮಾಣದ 300 ಬಾಟ್ಲಿಗಳು 6) ಡಿ.ಎಸ್.ಪಿ. ವಿಸ್ಕಿ 20 ರಟ್ಟಿನ ಪೆಟ್ಟಿಗೆಗಳಲ್ಲಿ 375 ಮಿಲಿಯ 480 ಬಾಟ್ಲಿಗಳು 7) ಡಿ.ಎಸ್.ಪಿ. ವಿಸ್ಕಿ 55 ರಟ್ಟಿನ ಪೆಟ್ಟಿಗೆಗಳಲ್ಲಿ 180 ಮಿಲಿಯ ಪ್ರಮಾಣದ 2640 ಬಾಟ್ಲಿಗಳು 8) ರಾಯಲ್ ಚಾಲೆಂಜ್ ವಿಸ್ಕಿ 10 ರಟ್ಟಿನ ಪೆಟ್ಟಿಗೆಗಳಲ್ಲಿ 750 ಮಿಲಿಯ 120 ಬಾಟ್ಲಿಗಳು 9) ಡಿ.ಎಸ್.ಪಿ. ಬ್ಲ್ಯಾಕ್ ವಿಸ್ಕಿ 10 ರಟ್ಟಿನ ಪೆಟ್ಟಿಗೆಗಳಲ್ಲಿ 750 ಮಿಲಿಯ 120 ಬಾಟ್ಲಿಗಳು 10) ಡಿ.ಎಸ್.ಪಿ. ವಿಸ್ಕಿಯ 5 ರಟ್ಟಿನ ಪೆಟ್ಟಿಗೆಗಳಲ್ಲಿ 375 ಮಿಲಿಯ 120 ಬಾಟ್ಲಿಗಳು 11) ಡಿ.ಎಸ್.ಪಿ. ಬ್ಲ್ಯಾಕ್ ವಿಸ್ಕಿ 10 ರಟ್ಟಿನ ಪೆಟ್ಟಿಗೆಗಳಲ್ಲಿ 180 ಮಿಲಿಯ 480 ಬಾಟ್ಲಿಗಳು ಒಟ್ಟು 4351.320 ಲೀಟರ್ ಮದ್ಯ ಈ ಎಲ್ಲವು ಸದರಿ ವಾಹನದಲ್ಲಿ ಸಿಕ್ಕಿದ್ದು ಆರೋಪಿ ಪುಟ್ಟಸ್ವಾಮಿಗೌಡ ತಂದಿ ಚವಡೇಗೌಡ, ಇವರಿಗೆ ಈ ಮದ್ಯಗಳನ್ನು ಹೊಂದಲು ಯಾವುದೇ ರಹದಾರಿ ಪತ್ರ ಇದ್ದ ಬಗ್ಗೆ ವಿಚಾರಿಸಿದ್ದು ಅದರ ಬಗ್ಗೆ ಆರೋಪಿ ಯಾವುದೇ ರಹದಾರಿ ಪತ್ರ ತೋರಿಸಲಿಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ. ಅವರು ತಮ್ಮ ಸಾಕ್ಷಿಯನ್ನು ಮುಂದುವರಿಸಿ

ಹಾಜರಾದ ಪಂಚಾಯತ್‌ದಾರರ ಸಮಕ್ಷಮ ಎಲ್ಲಾ ದ್ರವ್ಯಗಳಿಂದ 15 ಬಾಟ್ಲಿಗಳನ್ನು ಮಾದರಿಯಾಗಿ ತೆಗೆದು ಪಂಚಾಯತ್‌ದಾರರ ಸಮಕ್ಷಮ ಪಂಚನಾಮೆ ನಿಶಾನೆ ಪಿ-1 ರಂತೆ ತಯಾರಿಸಿ ಮದ್ಯದ ಬಾಟ್ಲಿಗಳು ಹಾಗೂ ವಾಹನವನ್ನು ವಶಪಡಿಸಿಕೊಂಡಿರುವರೆಂದು ಸಾಕ್ಷಿ ನುಡಿದಿರುತ್ತಾರೆ. ನಂತರ ಈ ಬಗ್ಗೆ ನಿಶಾನೆ ಪಿ-2 ರಂತೆ ಫಿರ್ಯಾದಿಯನ್ನು ಅ.ಸಾ. 3 ರವರಿಗೆ ನೀಡಿದರು ಎಂದು ಸಾಕ್ಷಿ ನೀಡಿರುತ್ತಾರೆ. ಅಂದೆ ಈ ಬಗ್ಗೆ ಅಧಿಕೃತ ಅಧಿಕಾರಿ ಅವರಿಗೆ ಕೂಡಾ ನಿಶಾನೆ ಪಿ-3 ರಂತೆ ವರದಿ ಸಲ್ಲಿಸಿದ್ದು ಇರುತ್ತದೆ. ಎಂದು ಸಾಕ್ಷಿ ನುಡಿದಿರುತ್ತಾರೆ.

ಪಿ.ಡಬ್ಲ್ಯು-1 ರವರು ನೀಡಿದ ಈ ಸಾಕ್ಷಿಯನ್ನು ಅಲ್ಲಗಳೆದು ಯಾರು ಈ ನ್ಯಾಯಾಲಯದ ಮುಂದೆ ಹಾಜರಾಗಿರುವುದಿಲ್ಲ. ಇದು ಅಲ್ಲದೇ ಪಂಚ ಸಾಕ್ಷ್ಯಾಧಾರರಾದ ಪಿ.ಡಬ್ಲ್ಯು.-2 ರವರು ಕೂಡಾ ಜಪ್ತಿ ಪಂಚನಾಮೆ ಬಗ್ಗೆ ಪಿ.ಡಬ್ಲ್ಯು-1, ರವರು ನೀಡಿದ ಸಾಕ್ಷಿಗೆ ಹೊಂದುವಂತೆ ಸಾಕ್ಷಿ ನುಡಿದಿರುತ್ತಾರೆ. ಈ ಇವರ ಸಾಕ್ಷಿಯನ್ನು ಕೂಡಾ ಯಾರು ಅಲ್ಲಗಳೆದಿರುವುದಿಲ್ಲಾ. ಪಿ.ಡಬ್ಲ್ಯು-3 ಅವರು ನಡೆಸಿದ ತನಿಖೆ ಬಗ್ಗೆ ಸಾಕ್ಷಿ ನುಡಿದಿರುತ್ತಾರೆ.

ಪಿ.ಡಬ್ಲ್ಯು.-1 ಮತ್ತು 2 ರವರು ನುಡಿದಂಥಹ ಸಾಕ್ಷಿಯನ್ನು ಪರಿಗಣಿಸಿ ಅದು ನಂಬಬಹುದಾದಂಥಹ ಸಾಕ್ಷಿ ಇರುತ್ತದೆ.

ಈ ಮೇಲ್ಕಾಣಿಸಿದ ಕಾರಣದಿಂದ ಜಪ್ತಾದ ವಾಹನವನ್ನು ಹಾಗೂ ಜಪ್ತಿ ಮಾಡಿದ ಮುದ್ದೇಮಾಲನ್ನು ಈಗಾಗಲೇ ರಾಜ್ಯ ಸರ್ಕಾರಕ್ಕೆ ಈ ಪ್ರಕರಣದಲ್ಲಿ ನೀಡಬಹುದಾದ ಅಂತಿಮ ತೀರ್ಮಾನದ ಷರತ್ತಿಗೆ ಒಳಪಟ್ಟು ವಿಲೇ ಮಾಡಲು ಆದೇಶ ಹೊರಡಿಸಲಾಗಿದೆ.

**ಆದೇಶದ ಸಂಖ್ಯೆ:ಇಎಕ್ಸ್‌ಇ:ಬಿಜೆಪಿ:ಡಿಟಿಸಿಆರ್ 361:2002-03, ದಿನಾಂಕ: 22ನೇ ಮೇ 2004**

ಕೆ.ಆರ್. ಗೋವಿಂದಶೆಟ್ಟಿ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ವಿಜಾಪೂರ ಜಿಲ್ಲೆ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಎ) ರ ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು ಇ.ಐ.ಬಿ. ಬೆಳಗಾಂವ ಇವರು ದಾಖಲು ಮಾಡಿದ ಅಬಕಾರಿ ಗುನ್ನೆ ನಂಬರ್:27:2002-03, ದಿನಾಂಕ 13-4-2003 ನೇದ್ದರಲ್ಲಿ ಜಪ್ತಾದ ವಾಹನ ಅಶೋಕ್ ಲೇಲ್ಯಾಂಡ್ ಲಾರಿ ನಂಬರ್: ಸಿ.ಎನ್.ಒ. 8310 ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಪ್ರಕರಣದಲ್ಲಿ ಜಪ್ತಾದ ಮುದ್ದೇಮಾಲನ್ನು ಶ್ಯಾಂಪಲ್ ಬಾಟ್ಲಿಗಳನ್ನು ಹೊರತುಪಡಿಸಿ 4351.320 ಲೀಟರ್ ದೇಶಿಯವಾದ ವಿದೇಶಿ ಮದ್ಯವನ್ನು ಮಾರಾಟ ಮಾಡಿ ರಾಜ್ಯ ಸರ್ಕಾರದ ಅಬಕಾರಿ ಇಲಾಖೆಗೆ ಸಂದಾಯ ಆಗುವಂತೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಈ ಆದೇಶವನ್ನು ಇಂದು ದಿನಾಂಕ 22-5-2004 ರಂದು ಉಕ್ತ ಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಪ್ರತಿಯನ್ನು ತಿದ್ದಿ ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

**ಕೆ.ಆರ್. ಗೋವಿಂದಶೆಟ್ಟಿ**

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ವಿಜಾಪೂರ ಜಿಲ್ಲೆ, ವಿಜಾಪೂರ.

**ಅನುಬಂಧ-1**

**ಫಿರ್ಯಾದಿದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

| | | | |
|---|---|---|---|
| ಪ್ರಾ.ಸಾ.-1- | ಶ್ರೀ ನಿಂಗಪ್ಪ ಗಣಪ್ಪ ಜೀರಗಾಳ<br>ಅಬಕಾರಿ ಉಪ ನಿರೀಕ್ಷಕರು ಇ.ಐ.ಬಿ. ಬೆಳಗಾಂವ. | - | ತನಿಖಾಧಿಕಾರಿ |
| ಪ್ರಾ.ಸಾ.-2- | ಶಬ್ಬೀರ ಹುಸೇನಸಾಬ ದರ್ಗಾ | - | ಪಂಚ |
| ಪ್ರಾ.ಸಾ.-3- | ಮಲ್ಲಪ್ಪ ಭೀಮಪ್ಪ ಹಳ್ಳದಮನಿ<br>ಅಬಕಾರಿ ಉಪ ನಿರೀಕ್ಷಕರು, ವಿಜಾಪೂರ ನಗರ ಉಪವಲಯ | - | ತನಿಖಾಧಿಕಾರಿ |

**ಅನುಬಂಧ-2**

**ಫಿರ್ಯಾದಿದಾರರ ಪರ ಮಂಡಿಸಲಾದ ದಾಖಲೆಗಳು**

| | | |
|---|---|---|
| ನಿಶಾನೆ ಪಿ - 1 | : | ಪಂಚನಾಮೆ (ದೃಢೀಕೃತ ಪತ್ರ) |
| ನಿಶಾನೆ ಪಿ - 1(ಎ) | : | ಪ್ರಾ.ಸಾ. 1 ರವರ ಸಹಿ |
| ನಿಶಾನೆ ಪಿ - 1(ಬಿ) | : | ಪ್ರಾ.ಸಾ. 2 ರವರ ಸಹಿ |
| ನಿಶಾನೆ ಪಿ - 2 | : | ಪ್ರಥಮ ವರ್ತಮಾನದ ವರದಿ |
| ನಿಶಾನೆ ಪಿ - 2(ಎ) | : | ಪ್ರಾ.ಸಾ. 1 ರವರ ಸಹಿ |
| ನಿಶಾನೆ ಪಿ - 3 | : | ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43 ರ ಮೇರೆಗೆ ವರದಿ. |
| ನಿಶಾನೆ ಪಿ - 3(ಎ) | : | ಪ್ರಾ.ಸಾ. 1 ರವರ ಸಹಿ |
| ನಿಶಾನೆ ಪಿ - 4 | : | ಸರ್ಚ್ ಮೆಮೊ |
| ನಿಶಾನೆ ಪಿ - 4(ಎ) | : | ಪ್ರಾ.ಸಾ. 1 ರವರ ಸಹಿ |
| ನಿಶಾನೆ ಪಿ - 5 | : | ತನಿಖಾ ವರ್ಗಾವಣೆ ಮಾಡಿದ ಪತ್ರ |
| ನಿಶಾನೆ ಪಿ - 5(ಎ) | : | ಪ್ರಾ.ಸಾ. 1, ರವರ ಸಹಿ |
| ನಿಶಾನೆ ಪಿ - 6 | : | ರಸಾಯನಿಕ ತಜ್ಞರಿಗೆ ಬರೆದ ಪತ್ರದ ಪ್ರತಿ |
| ನಿಶಾನೆ ಪಿ - 6(ಎ) | : | ಪ್ರಾ.ಸಾ. 3 ರವರ ಸಹಿ |
| ನಿಶಾನೆ ಪಿ - 7 | : | ರಸಾಯನಿಕ ತಜ್ಞರ ವರದಿಯ ಪ್ರತಿ |

ಅನುಬಂಧ-3

ಫಿರ್ಯಾದಿದಾರರ ಪರ ಗುರುತಿಸಲಾದ ವಸ್ತುಗಳು

1) ಮುದ್ದೇಮಾಲು - 1 - ಜಪ್ತಾದ ವಾಹನ
2) ಮುದ್ದೇಮಾಲು - 2 - ಮಾದರಿ ಮದ್ಯದ ಬಾಟ್ಲಿಗಳು-15

ಅನುಬಂಧ-4

ವಾಹನದ ಮಾಲೀಕರ ಪರವಾಗಿ ವಿಚಾರಣೆ ಮಾಡಿದ ಸಾಕ್ಷಿದಾರರು

ಇಲ್ಲಾ

ಅನುಬಂಧ-5

ವಾಹನದ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು

ಇಲ್ಲಾ

ಕೆ.ಆರ್. ಗೋವಿಂದಶೆಟ್ಟಿ

ಪಿ.ಆರ್. 784 ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ವಿಜಾಪೂರ ಜಿಲ್ಲೆ, ವಿಜಾಪೂರ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ-ವಿಭಾಗ-2, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಐ.ಟಿ.ಐ. ಆವರಣ, ಬೆಂಗಳೂರು-29**

**ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ:5:2003, ದಿನಾಂಕ: 26ನೇ ಮೇ 2004**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1. ಶ್ರೀ ಕಾವೇರಪ್ಪ ಬಿನ್ ಲೇಟ್ ಯಲ್ಲಪ್ಪ
2. ಕು: ಕಾವ್ಯ ಬಿನ್ ಡಾ:ಆಫ್ ಲೇಟ್ ಯಲ್ಲಪ್ಪ
3. ಶ್ರೀಮತಿ ಪಾಪಮ್ಮ ಕೋಂ ಕಾವೇರಪ್ಪ
ತಿರುಮಲಹಟ್ಟಿ ವಿಲೇಜ್, ಮಾಸ್ತಿ ಹೋಬಳಿ, ಮಾಲೂರು ತಾ: ಕೋಲಾರ ಜಿ:

ಪ್ರತಿವಾದಿಗಳು:

1. ಶ್ರೀ ಬಾಬಾಸಾಬ್ ಬಿನ್ ಅಬ್ದುಲ್ ಖುದುಸಖಾನ್, ಟಿ.ಎಂ.ಸಿ. ಕಾಂಪ್ಲೆಕ್ಸ್ ಮಾರುತಿ ಎಕ್ಸ್‌ಟೆನ್‌ಷನ್, ಮಾಲೂರು ಟೌನ್, ಮಾಲೂರು.
2. ಮೆ: ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ.ಲಿ., ಯುನಿಟಿ ಬಿಲ್ಡಿಂಗ್, ಬೆಂಗಳೂರು.

**ಪ್ರಕಟಣೆ**

ಅರ್ಜಿದಾರರಾದ ಕಾವೇರಪ್ಪ, ಕು: ಕಾವ್ಯ, ಶ್ರೀಮತಿ ಪಾಪಮ್ಮ ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ದಿವಂಗತ ಯಲ್ಲಪ್ಪ ಇವರು ಪ್ರತಿವಾದಿ-1 ಇವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತರ ಅವಲಂಬಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಪಿ.ಆರ್. 800 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಬೆಂಗಳೂರು ಉಪ-ವಿಭಾಗ-2, ಬೆಂಗಳೂರು.

**IN THE COURT OF COMMISSIONER FOR WORKMEN'S COMPENSATION, BIDAR**

**No: LOB/WCA/Cr-21/2004**

**APPLICANTS:** **V/S** **RESPONDENT**

Beebee Shabana W/o Late Basheeruddin, Age 20 Years Occ : House hold, R/o Bahairnahalli Taluk, Dist Bidar and 3 others.

RESPONDENT:

1. Md. Moizuddin, S/o Md. Nizamuddin R/o Juffair Gonda, Hyderabad.
2. United India Insurance Co. Ltd., Secunderabad, DN. U.I.I. Co. Ltd., Gulbarga.

**PROCLAMATION**

Smt Beebee Shabana W/o Late Basheer Uddin, R/o Bahairnalli Tq & Dist Bidar have/has filed application in this court claiming compensation stating that Late: Basheer Uddin was working as Driver under the Respondent No.I he met with an accident arising out of and during the course of employment as a result he died on:24.1.2004.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclamation, if no applications or objections are received within the specified date the court will proceeded further in the matter.

P.R. 746 Commissioner for Workmen's Compensation, Bidar.

**UNIVERSITY OF AGRICULTURAL SCIENCES, BANGALORE**
**Administrative Office, GKVK, Bangalore-560 065**
**NOTIFICATION No. AO/RT/2004-05, Dated: 16th June 2004**

**Sub:-** Prescribing qualifications for teaching posts in the University of Agricultural Sciences, Bangalore.

**Ref:-**
1. Letter No. F.No.1(15) 98-Per IV dtd.03-3-1999 of the Government of India, Ministry of Agriculture, Dept. of Agricultural Research & Education, Krishi Bhavan, New Delhi.
2. Amendment to statute 30(3) of the UAS, Bangalore published in the Karnataka Gazette dtd.14-1-2000.
3. Notification No.AO/RT/2002-03 dtd.26-4-2002 published in the Karnataka Gazette dtd.30-4-2002.
4. Letter No.AHD 7 AHC 2003 dtd.30-4-2004 of the Principal Secretary, Agriculture & Horticulture Department, Government of Karnataka.
5. Minutes of the 305th Meeting of the Board of Regents, UAS, Bangalore, held on 2-6-2004 Item No. 18.
6. Approval of the Vice-Chancellor, UAS, GKVK, dated 16-6-2004.

In pursuance of the decision of the 305th meeting of the Board of Regents of UAS, Bangalore held on 2-6-2004, following are the qualification prescribed for teaching posts in the cadre of Professor, Associate Professor and Assistant Professor for direct recruitment in the University of Agricultural Sciences, Bangalore. These qualifications shall come into force from the date of the decision of the Board i.e., 2-6-04. This is in modification of the Notification No. AO/RT/2002-03 dated 26-4-2002.

**I. Professor cadre:**

1. A Ph.D. degree in the concerned subject.
2. An eminent scholar with published work of high quality, actively engaged in research, with 10 years of experience in post graduate teaching, and/or experience in research at the University/National level Institution, including experience of guiding research at Doctoral level

   OR

   An outstanding scholar with established reputation who has made significant contribution to knowledge.
3. In exceptional cases, the teachers with 15 years of UG teaching/research experience could also be considered.

**II. Associate Professor cadre:**

1. A Ph.D. degree in the concerned subject.
2. Good academic record with a Doctoral Degree or equivalent published work. In addition to these, candidates who join from outside University system, shall also possess atleast 55% of the marks or an equivalent grade of B in the seven point scale with letter grades O,A,B,C,D,E & F at the Master's degree level.
3. Five years of experience of Teaching and/or research excluding the periods spent for obtaining the research degrees and as made some mark in the areas of Scholarship as evidenced by quality of publication, contribution to educational innovation, design of new courses and curricula.

**III. Assistant Professor cadre:**

1. Good Academic record with atleast 55% of the marks or, an equivalent grade of B in 7 point scale with letter grades O,A,B,C,D,E & F at the Master's degree level, in the relevant subject from an Indian University, or an equivalent degree from a Foreign University.

   Besides fulfilling the above qualifications, candidates should have cleared the eligibility test (NET) for Assistant Professors conducted by the UGC, CSIR or similar test accredited by the UGC.

**Note:-**

1. A relaxation of 5% may be provided from 55% to 50% of the marks at the Master's level for the SC/ST category.
2. A relaxation of 5% may be provided from 55% to 50% of the marks to the Ph.D. degree holders who have passed their Master's degree prior to 19th September, 1991.

3. B in the 7 point scale with letter grade O,A,B,C,D,E & F shall be regarded as equivalent of 55% wherever the grading system is followed. The details of conversion on 7 point scale into percentage equivalent is as under:

**Seven point scale**

| Grade | Grade Point | Percentage Equivalent |
|---|---|---|
| 'O'=Outstanding | 5.50-6.00 | 75 - 100 |
| 'A'=Very Good | 4.50-5.49 | 65 - 74 |
| 'B'=Good | 3.50-4.49 | 55 - 64 |
| 'C'=Average | 2.50-3.49 | 45 - 54 |
| 'D'=Below Average | 1.50-2.49 | 35 - 44 |
| 'E'=Poor | 0.50-1.49 | 25 - 34 |
| 'F'=Fail | 0-0.49 | 0-25 |

4. The minimum requirement of 55% shall not be insisted upon for Professor/Associate Professors/Assistant Professors and Deputy Director of Student Welfare, for the existing incumbents who are also already in the University System. However, these marks should be insisted upon for those entering the system from outside and those at the entry point of Assistant Professor.
5. NET shall remain the compulsory requirement for appointment as Assistant Professor even for candidates having Ph.D. degree. However, the candidates who have completed M.Phil degree by 31st December, 1993 or have submitted Ph.D. thesis to the University in the concerned subject on or before 31st December, 2002 are exempted from appearing in the NET examination. In case such candidates fail to obtain Ph.D. degree, they shall have to pass the NET examination.
6. A relaxation of the minimum marks at the PG level from 55% to 50% for appointment as Assistant Professor may be provided to the candidates who have cleared the JRF examination conducted by UGC/CSIR only, prior to 1989, when the minimum marks required to appear for JRD exam were 50%.
7. The Ph.D. should continue to be a compulsory requirement for the designation of Professor and Associate Professor.
8. For all faculties position in the Veterinary Sciences, the candidates must possess recognised veterinary qualification included in the first or II schedule to Indian Veterinary Council Act 1984 and registered with the State Veterinary Council/Veterinary Council of India.

By Order

Administrative Officer, University of Agricultural Sciences, Bangalore.

**UNIVERSITY OF AGRICULTURAL SCIENCES, BANGALORE**

**Administrative Office, GKVK, Campus, Bangalore-560 065**

**NOTIFICATION No. AO/RT/11/27/2004-05, Dated: 16th June 2004**

**Sub:-** Recruitment of backlog teaching posts in the University of Agricultural Sciences, Bangalore. Withdrawal of Notification dated 27-5-2003 and issue of fresh Notification.

**Ref:-**
1. Govt. Notification No. DPAR 13 SBC 2001 dated 21-11-2001.
2. Prof N.V. Narasimhaiah Committee Report dated 8-1-2002.
3. Notification No. AO/RT/11/26/2003-04 dated 27-5-2003.
4. Letter No. AHD 7 AUM 2003 dated 10-9-2003 from the Principal Secretary to Govt., A & H Dept., Govt. of Karnataka.
5. ಸಮಾಜ ಕಲ್ಯಾಣ ಆಯುಕ್ತರ ಪತ್ರ ಸಂಖ್ಯೆ:ಸಕನಿ:ಬಿ ಮತ್ತು ಆರ್ (ವಿವಿ):ಸಿಆರ್-35:2003-04 ದಿನಾಂಕ: 9-3-2004.
6. Letter No. AHD 7 AHC 2003 dated 30-4-2004 from the Principal Secretary to Govt., A & H Dept., Govt. of Karnataka.
7. Approval of the Vice-Chancellor, UAS, GKVK, dated 15-6-2004.

The University of Agricultural Sciences, Bangalore advertised backlog teaching posts under the Notification dated 27-5-2003 cited at ref. (3) above, to fill up the backlog teaching vacancies. The interviews were scheduled during September 2003 to fill up these vacancies.

In the meanwhile, the Government in its letter dated 10-9-2003, directed the University to stop forthwith the interviews scheduled for teaching posts till a final decision on the mode of recruitment for filling up of the backlog vacancies is taken by the Government. Accordingly, the interviews scheduled were stopped.

Further, the Government in its letter dated 30-4-2004 cited at ref.(6) above, directed the University to fill up the backlog vacancies of teaching posts of the following lines.

1. Prescribe the ICAR qualifications as existing at present.
2. No upper age limit need be prescribed.

Therefore, in pursuance of the above directions of the State Government, the Notification dated 27-5-2003 issued by the University inviting applications for filling up of the backlog teaching posts is hereby withdrawn and a fresh Notification is issued herewith.

Applications are invited in the prescribed form from the candidates who are qualified as on the last date prescribed for receipt of filled in applications for filling up of the backlog teaching posts in the University of Agricultural Sciences, Bangalore.

The procedure for selection of candidates for the posts advertised under this Notification will be based on the Government Notification No. DPAR 13 SBC 2001 dated 21-11-2001 as one Time Measure, prescribing the ICAR qualifications as existing at present and with no upper age limit.

Those who had applied earlier in response to the Notification dated 27-5-2003 will have to apply afresh.

ವಿವಿಧ ಸಮತಳ ಮೀಸಲಾತಿಗಳನ್ನು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 97 ಸೆನೆನಿ 2002 ದಿನಾಂಕ: 22-11-2002ರ ಪ್ರಕಾರ ಅನುಸರಿಸಲಾಗುವುದು.

**1. PROFESSOR CADRE: (Scale of pay: Rs. 16400-450-20900-500-22400)**

| Sl. No. | Subject | Posts SC | Posts ST | Sl. No. | Subject | Posts SC | Posts ST |
|---|---|---|---|---|---|---|---|
| 1. | Agronomy | - | 1 | 13. | Animal Genetics & Breeding | - | 1 |
| 2. | Horticulture | 1 | 1 | 14. | Vety. Surgery | - | 1 |
| 3. | Agril. Entomology | 1 | - | 15. | Vety. Anatomy | 1 | - |
| 4. | Agril. Economics | 1 | - | 16. | Vety. Gynaecology & Obstetrics | 1 | - |
| 5. | Plant Pathology | 1 | 1 | 17. | Vety. Physiology | 1 | - |
| 6. | Agril. Engineering | 1 | - | 18. | Vety. Pathology | 1 | - |
| 7. | Soil Science & Agril. Chemistry | 1 | - | 19. | Fishery Oceanography | 1 | - |
| 8. | Farm Forestry | 1 | - | 20. | Aquatic Biology | 1 | - |
| 9. | Animal Nutrition and Management | - | 1 | 21. | Fishery Economics | 1 | - |
| 10. | Vety. Medicine | 1 | - | 22. | Dairy Chemistry | 1 | - |
| 11. | Vety. Microbiology | 1 | - | 23. | Dairy Technology | - | 1 |
| 12. | Poultry Science | 1 | - | | | **18** | **7** |

**Horizontal Reservations: (Interse Merit)**

SC: Women-6, Ex-servicemen-1, Rural Candidate-5, Studied in Kannada Medium-1. - 13

ST: Women-2, Rural Candidate-2. - 4

**2. ASSOCIATE PROFESSOR CADRE: (Scale of pay:Rs.12000-420-18300)**

| Sl. No. | Subject | Posts SC | Posts ST | Sl. No. | Subject | Posts SC | Posts ST |
|---|---|---|---|---|---|---|---|
| 1. | Agronomy | 2 | 2 | 14. | Vety. Medicine | 1 | - |
| 2. | Plant Breeding and Genetics | 1 | - | 15. | Vety. Surgery | 1 | - |
| 3. | Plant Pathology | 1 | - | 16. | Vety. Pharmacology | 1 | - |
| 4. | Agril.Engineering:PHT-1, FPM-2, SWCE-1. | 4 | - | 17. | Vety. Microbiology | 1 | - |
| 5. | Soil Science and Agril. Chemistry | 2 | 1 | 18. | Vety. Parasitology | 1 | - |
| 6. | Horticulture | - | 2 | 19. | Dairy Microbiology | 1 | - |
| 7. | Agril.Entomology | - | 1 | 20. | Dairy Chemistry | 1 | - |
| 8. | Seed Technology | 1 | - | 21. | Fishery Oceanography | 1 | - |
| 9. | Farm Forestry | 1 | 1 | 22. | Fish Nutrition | 1 | - |
| 10. | Sericulture (Moriculture) | 1 | - | 23. | Marine Biology | 1 | - |
| 11. | Animal Genetics & Breeding | 1 | - | 24. | Canning | 1 | - |
| 12. | Meat Science | - | 1 | 25. | Fishery Economics | 1 | - |
| 13. | Vety. Physiology | 1 | - | | | **27** | **8** |

**Horizontal Reservation: (Interse Merit)**

SC: Women-8, Ex-servicemen-2, Rural Candidate-7, Studied-18 in Kannada Medium-1. - 18

ST: Women-3, Rural Candidate-2. - 5

**3. ASSISTANT PROFESSOR CADRE: (Scale of pay Rs.8000-275-13500)**

| Sl. No. | Subject | Posts SC | Posts ST | Sl. No. | Subject | Posts SC | Posts ST |
|---|---|---|---|---|---|---|---|
| 1. | Agril.Entomology (Women-SC-1, ST-1 Rural candidate ST-1) | 2 | 3 | 14. | Computer Science | 1 | 1 |
| 2. | Agronomy (Women-SC-1, ST-1, Rural Candidate-SC-1, ST-1) | 3 | 3 | 15. | Horticulture | - | 1 |
| 3. | Agril. Economics | - | 1 | 16. | Agril.Engineering (Craft) | 1 | - |
| 4. | Plant Breeding & Genetics (Women-ST-1, Rural candidate-ST-1) | - | 3 | 17. | Animal Nutrition and Management (Women-SC-1) | 2 | - |
| 5. | Agril.Microbiology | 1 | 1 | 18. | Vety, Anatomy | 1 | - |
| 6. | Plant Pathology (Women-ST-1, Rural Candidate-ST-1) | - | 4 | 19. | Vety. Physiology | 1 | 1 |
| 7. | Agril.Engineering:PHT | 1 | 1 | 20. | Vety Medicine (Women-SC-1) | 2 | - |
| 8. | Agril.Engineering: PHT/SWCE/FPM | 1 | 1 | 21. | Animal Genetics & Breeding (Women-SC-1) | 2 | 1 |
| 9. | Soil Science and Agril. Chemistry (Women Candidate-ST-1) | 1 | 2 | 22. | Vety. Gynaecology & Obstretrics | 1 | - |
| 10. | Home Science (F&N) | - | 1 | 23. | Vety. Pharmacology | 1 | - |
| 11. | Agril.Extension (Women-SC-1, Rural Candidate-SC-1) | 4 | 1 | 24. | Dairy Science (Women-SC-1) | 2 | 1 |
| 12. | Farm Forestry | - | 1 | 25. | Training Associate (Vety Science) | 1 | - |
| 13. | Statistics | 1 | - | 26. | Fishery Engineering (Craft) | 1 | - |
| | | | | | | **30** | **27** |

**Qualifications in brief:**

**Professor cadre posts:**

1. A Ph.D. degree in the concerned subject.
2. 10 years of experience in Post Graduate teaching and/or experience in research.
3. In exceptional cases, the teachers with 15 years of U.G.teaching/research experience will also be considered.

**Associate Professor cadre posts:**

1) A Ph.D. degree in the concerned subject.
2) The candidates who join from outside University system, shall also possess atleast 50% of marks or an equivalent grade of B in the seven point scale with letter grades O,A,B,C,D,E & F at the Master's degree level.
3) 5 years of experience of teaching and/or research excluding the periods spent for obtaining the research degrees.

**Assistant Professor cadre posts:**

1) A Master's degree in the relevant subject with at least 50% of marks or an equivalent grade of B in 7 point scale with letter grades O,A,B,C,D,E & F.
2) Should have cleared the NET.

**Note:-**

For all faculties position in the Veterinary Sciences, the candidates must possess recognised veterinary qualification included in the first or II schedule to Indian Veterinary Council Act 1984 and registered with the State Veterinary Council/Veterinary Council of India.

Detailed qualification slips can be had along with the application forms.

**Instructions:-**

1. **Application Fee. Rs.100/- (For SC/STs only).**
   A xerox copy of caste certificate issued by the competent authority should be submitted in support of claim for reservation.
2. The candidates claiming for Rural quota should enclose the certificate of study in rural areas (for 10 full academic years from 1st to 10th Standards) issued by the competent authority.
3. The candidates claiming for having studied in Kannada Medium quota should enclose the certificate of study in kannada (for 10 full academic years from 1st to 10th Standards) issued by the competent authority.
4. Application forms along with the qualifications slip may be obtained after the publication of this Notification in the News Paper on payment of the prescribed fee in person from the undersigned either in the form of Crossed Postal Order/Bank Demand Draft drawn in favour of the Comptroller, University of Agricultural Sciences, GKVK, Bangalore-560 065. Postal Order/Demand Draft purchased on or after the date of publication of this Notification in the News Paper only are accepted.
5. The candidates applying for the teaching posts have to enclose their bio-data, reprints of their published research papers, publications.
6. The candidates who studied under Trimester System and other than 10 point grading system are required to produce the equivalent percentage certificate obtained from the respective University.
7. A self addressed envelop of the size of 12" x 4" duly affixing postal stamp of the value of Rs. 12/- should be sent if the application forms are required to be sent by post.
8. Ex-servicemen or children of Defence Personnel killed or disabled in action are exempted from payment of application fee provided they produce the appropriate certificate in this behalf.
9. Seperate applications are to be sent for each post.
10. The last date for issuing of the application forms is 20 days from the date of publication of this Notification in the News Papers.
11. Filled in applications together with the attested copies of testimonials should be sent so as to reach the undersigned on or before 30 days from the date of publication of this Notification in the News Papers. The candidates staying abroad may apply on plain paper giving details of their bio-data enclosing copies of their educational certificates etc. as per Instructions at 4 above along with the prescribed fee in foreign currency.
12. All belated, incomplete applications and without payment of prescribed fees will be rejected.
13. The appointed candidates will be governed by the Statutes and Regulations of the University.
14. The details of the notification can be obtained by logging to the UAS Website: http:uasbng.kar.nic.in

By Order

P.D. 41 Administrative Officer, University of Agricultural Sciences, Bangalore.

**ವಿಶೇಷ ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಂತಿಮ ಅಧಿಸೂಚನೆ ನಂ: ಕೆ.ಎಸ್.ಎ. ಸಿಆರ್ 4/2000-01, ದಿನಾಂಕ: 12ನೇ ಮೇ 2004**

ನಂ: ಕೆ.ಎಸ್.ಎ ಸಿಆರ್ 4/2000-01 ದಿನಾಂಕ: 21-3-2001ರ ಪ್ರಿಲಿಮಿನರಿ ಅಧಿಸೂಚನೆಯನ್ನು ದಿ: 10-5-2001ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿ, ಅದರಲ್ಲಿ ಸದರೀ ಅಧಿಸೂಚನೆಯ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಲಗ್ಗೆರೆ ನೀಲಗಿರಿ ತೋಪು ಕೊಳಚೆ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ನಿರ್ಮೂಲನೆ ಮತ್ತು ಅಭಿವೃದ್ಧಿ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ಪ್ರಾರಂಭಿಕವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿ, ಸಂಬಂಧಿಸಿದವರಿಂದ ಆಕ್ಷೇಪಣೆಗಳು ಆಹ್ವಾನಿಸಲಾಗಿತ್ತು.

ಸದರಿ ಅಧಿಸೂಚನೆಗೆ ನಿಗದಿತ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳು ಬರದಿದ್ದುದರಿಂದ, ದಿ: 24-4-2004ರಂದು ಸ್ಥಳ ತನಿಖೆ ನಡೆಸಿದೆ. ಸ್ಥಳ ತನಿಖಾ ವೇಳೆಯಲ್ಲಿ ಪ್ರಶ್ನಿತ ಕೊಳಚೆ ಪ್ರದೇಶವು ಕೆ.ಐ.ಎ.ಡಿ.ಬಿ. ಗೆ ಸ್ವಾಧೀನಪಡಿಸಿಕೊಂಡಿರುವ ಸ್ಥಳದಲ್ಲಿದ್ದು, ಅಲ್ಲಿ ಸುಮಾರು 89 ಗುಡಿಸಲು, ಮನೆಗಳು ಇರುತ್ತವೆ. ಈ ಕೊಳಚೆ ಪ್ರದೇಶಕ್ಕೆ ಮೂಲಭೂತ ನಾಗರೀಕ ಸೌಲಭ್ಯಗಳ ಕೊರತೆ ತೀವ್ರವಾಗಿರುತ್ತದೆ. ಈ ಪ್ರದೇಶವು ಕೊಳಚೆ ಪ್ರದೇಶದ ಗುಣ ಲಕ್ಷಣಗಳನ್ನು ಹೊಂದಿರುತ್ತದೆ. ಆದರೆ ಅತಿ ಚಿಕ್ಕ ಪ್ರದೇಶದಲ್ಲಿ ಮೇಲ್ಕಂಡ 89 ಗುಡಿಸಲು/ಮನೆಗಳು ಅಡಕವಾಗಿದ್ದು, ನಾಗರೀಕ ಸೌಲಭ್ಯಗಳನ್ನು ಒದಗಿಸಲು ಸೂಕ್ತವಾಗಿರುವುದಿಲ್ಲ. ಆದ್ದರಿಂದ ಈ ಕೊಳಚೆ ಪ್ರದೇಶ ನಿವಾಸಿಗಳನ್ನು ಬೇರೆ ಕಡೆಗೆ ಸ್ಥಳಾಂತರಿಸುವುದು ಸೂಕ್ತವೆಂದು ಅಭಿಪ್ರಾಯಪಡಲಾಗಿದೆ ಹಾಗೂ ಸದರೀ ಕೊಳಚೆ ಪ್ರದೇಶವನ್ನು ಸ್ಥಳಾಂತರಿಸುವ ಷರತ್ತಿಗೊಳಪಟ್ಟು ಅಂತಿಮವಾಗಿ ಕೊಳಚೆ ಪ್ರದೇಶವೆಂದು ಘೋಷಿಸಲು ತೀರ್ಮಾನಿಸಲಾಗಿದೆ.

ಆದ್ದರಿಂದ ಕರ್ನಾಟಕ ಕೊಳಚೆ ಪ್ರದೇಶಗಳ (ನಿರ್ಮೂಲನೆ ಮತ್ತು ಅಭಿವೃದ್ಧಿ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ದತ್ತವಾಗಿರುವ ಅಧಿಕಾರದಂತೆ, ಈ ಕೆಳ ಷೆಡ್ಯೂಲ್‌ನಲ್ಲಿರುವ ಪ್ರದೇಶವನ್ನು ಮೇಲ್ಕಂಡ ಕಾಯ್ದೆಯ ಸೆಕ್ಷನ್ 3 ರಡಿಯಲ್ಲಿ ಅಂತಿಮವಾಗಿ "ಕೊಳಚೆ ಪ್ರದೇಶ" ವೆಂದು ಘೋಷಿಸಿರುತ್ತೇನೆ.

**ಷೆಡ್ಯೂಲ್**

ಬೆಂಗಳೂರು ನಗರ ಕಾರ್ಪೊರೇಷನ್ ವ್ಯಾಪ್ತಿಯ ಲಗ್ಗೆರೆ ಸ.ನಂ. 150/1ರ ಕೆ.ಐ.ಎ.ಡಿ.ಬಿ. ಜಮೀನಿನಲ್ಲಿರುವ "ನೀಲಗಿರಿ ತೋಪು" ಕೊಳಚೆ ಪ್ರದೇಶದ ವಿವರ ಹಾಗೂ ಚೆಕ್ಕುಬಂದಿ ತಃಖ್ತೆ.

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಕೊಳಚೆ ಪ್ರದೇಶದ ಮಾಲೀಕರ ಹೆಸರು ಮತ್ತು ವಿಳಾಸ | ಸ. ನಂ. | ವಿಸ್ತೀರ್ಣ (ಚ.ಅ) | ಚೆಕ್ಕುಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1. | ನೀಲಗಿರಿ ತೋಪು ಕೊಳಚೆ ಪ್ರದೇಶ ಲಗ್ಗೆರೆ | ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಬೆಂಗಳೂರು. | 150/1 | 0-06 | ರಸ್ತೆ | ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಜಾಗ | ರಸ್ತೆ | 100 ಅಡಿ ರಸ್ತೆ |

ಜಿ.ಎಸ್. ನಾರಾಯಣಸ್ವಾಮಿ

ಪಿ.ಆರ್. 856 ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ನ್ಯಾಯಾಲಯ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು-18**

**ದಾವಾ ಅರ್ಜಿ ಸಂಖ್ಯೆ.ಜೆಆರ್‌ಬಿ:ಎಂಡಿ:129:2003-04, ದಿನಾಂಕ: 31ನೇ ಮೇ 2004**

**ವಾದಿ**

ಕಾರ್ಯದರ್ಶಿ,
ದಿ ಬೆಂಗಳೂರು ಸಿಟಿ ಪೊಲೀಸ್ ಹೌಸಿಂಗ್
ಕೋ-ಆಪರೇಟಿವ್ ಸೊಸೈಟಿ ಲಿಮಿಟೆಡ್, ನಂ.1,
ಇನ್‌ಫೆಂಟ್ರಿ ರಸ್ತೆ, ಬೆಂಗಳೂರು-560 001.

**ಪ್ರತಿವಾದಿಗಳು**

ಶ್ರೀ ವಿ.ಕೆ.ಜಿ. ಕುಮಾರ್ (ಮೃತರಾಗಿರುತ್ತಾರೆ)
ಅವರ ವಾರಸುದಾರರು
1. ಶ್ರೀಮತಿ ಚುಂಚುಲಕ್ಷ್ಮಿ ಕೋಂ ಲೇಟ್ ವಿ.ಕೆ.ಜಿ. ಕುಮಾರ್
2. ಗುರುರಾಜ್ ನರಸಿಂಹ ಕುಮಾರ್,
ಬಿನ್ ಲೇಟ್ ವಿ.ಕೆ.ಜಿ. ಕುಮಾರ್
3. ಕುಮಾರಿ ವೃಂದ, ಬಿನ್ ಲೇಟ್ ವಿ.ಕೆ.ಜಿ. ಕುಮಾರ್
ವಾಸ:ನಂ.34/52, 1ನೇ ಮುಖ್ಯರಸ್ತೆ, 9ನೇ ಕ್ರಾಸ್,
ಸಂಜೀವಿನಿನಗರ, ಮೂಡಲಪಾಳ್ಯ, ಬೆಂಗಳೂರು-560 072.

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರ ರೀತ್ಯಾ ಚರಾಸ್ತಿಯನ್ನು ಅಟ್ಯಾಚ್ ಮಾಡಿರುವ ಬಗ್ಗೆ ನೋಟೀಸು**

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ಈ ನ್ಯಾಯಾಲಯದ ಮುಂದೆ ಹೂಡಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಗಳಿಂದ ಒಟ್ಟು ರೂ.31,30.313/- ಗಳನ್ನು ಶೇಕಡಾ 18 ರಂತೆ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ದಾವಾ ಅರ್ಜಿಯನ್ನು ದಾವಾ ಸಂಖ್ಯೆ.ಜೆಆರ್:ಎಂಡಿ:129:2003-04 ರನ್ವಯ ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾದೆ. ಹಾಗೂ ವಾದಿಯ ಈ ದಾವಾ ಅರ್ಜಿಯನ್ನು ಇತ್ಯರ್ಥಕ್ಕಾಗಿ ಸಹಕಾರ ಸಂಘಗಳ ಉಪನಿಬಂಧಕರು-2, ಬೆಂಗಳೂರು ನಗರ ಜಿಲ್ಲೆ ಇವರಿಗೆ ವಹಿಸಲಾಗಿದೆ.

2. ವಾದಿಯು ಅವರ ಈ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment before Judgement) ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. ಪ್ರತಿವಾದಿಗಳು ಅವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ವತ್ತನ್ನು ಮಾರಾಟ ಮಾಡಲು/ಪರಭಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದೇ ಇದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್:ಡಿಕ್ರಿ ನೀಡಿದ್ದರೂ ಸದರಿ ಅವಾರ್ಡ್: ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

3. ವಾದಿಯ ದಾವಾ ಅರ್ಜಿ ಮತ್ತು ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ, ವಾದಿಯು ಕಲಂ 103 ರ ಅರ್ಜಿಯಲ್ಲಿ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಅಲ್ಲದೇ ಪ್ರತಿವಾದಿಗಳು ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ / ಪರಭಾರೆ ಮಾಡದಂತೆ ತಡೆಯದೇ ಇದ್ದಲ್ಲಿ, ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್/ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ. ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

4. ಮೇಲಿನ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರ.ಸಂ. ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ:21-11-2001 ರನ್ವಯ ದತ್ತವಾಗಿರುವ ಅಧಿಕಾರವನ್ನು

ಚಲಾಯಿಸುತ್ತಾ, ಬಸವೇಗೌಡ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

ಪ್ರತಿವಾದಿಗಳು ಒಂದು ವೇಳೆ ಈ ತೀರ್ಪಿಗೆ ಪೂರ್ವಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ.31,30,313/- ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ ಖಾತೆಗೆ ಜಮಾ ಮಾಡಿ ದಿನಾಂಕ:25-6-2004 ರ ಒಳಗಾಗಿ ಅಧಿಕೃತ ಚಲನ್ / ರಶೀತಿಗಳನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಗಳು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ಅಟ್ಯಾಚ್‌ಮೆಂಟ್ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್ ಆಸ್ತಿಯ ವಿವರ ಷೆಡ್ಯೂಲ್-I**

ಬೆಂಗಳೂರು ಉತ್ತರ ತಾಲ್ಲೂಕು, ರಾಮಚಂದ್ರಪುರ ಗ್ರಾಮ ಪಂಚಾಯತ್ ವ್ಯಾಪ್ತಿಗೆ ಒಳಪಡುವ ನರಸೀಪುರ ಗ್ರಾಮದಲ್ಲಿರುವ ಆಸ್ತಿ ಸಂಖ್ಯೆ 84, ಖಾತಾ ನಂ.99/40, ಪೂರ್ವದಿಂದ ಪಶ್ಚಿಮಕ್ಕೆ 30 ಅಡಿ ಮತ್ತು ಉತ್ತರದಿಂದ ದಕ್ಷಿಣಕ್ಕೆ 40 ಅಡಿ ಅಳತೆಯ ನಿವೇಶನದಲ್ಲಿ ಕಟ್ಟಿರುವ ಎರಡು ಅಂತಸ್ತಿನ ಕಟ್ಟಡ, ವ್ಯಾಪಾರ ಮಳಿಗೆ, ಬಾವಿ ಇತ್ಯಾದಿ ಸೇರಿದಂತೆ ಚಕ್ಕುಬಂದಿ:

ಪೂರ್ವಕ್ಕೆ : ನಿವೇಶನ ಸಂಖ್ಯೆ 83
ಪಶ್ಚಿಮಕ್ಕೆ : ರಸ್ತೆ
ಉತ್ತರಕ್ಕೆ : ನಿವೇಶನ ಸಂಖ್ಯೆ 65
ದಕ್ಷಿಣಕ್ಕೆ : ರಸ್ತೆ

**ಷೆಡ್ಯೂಲ್-II**

ಬೆಂಗಳೂರು ನಗರದ (ಬೆಂಗಳೂರು-72) ಮೂಡಲಪಾಳ್ಯ ಸಂಜೀವಿನಿ ನಗರದ 8ನೇ ಅಡ್ಡರಸ್ತೆ, 1ನೇ ಮುಖ್ಯರಸ್ತೆಯಲ್ಲಿರುವ ಮನೆ ಸಂಖ್ಯೆ:34/52, ಪೂರ್ವದಿಂದ ಪಶ್ಚಿಮಕ್ಕೆ 30 ಅಡಿ ಉತ್ತರದಿಂದ ದಕ್ಷಿಣಕ್ಕೆ 40 ಅಡಿ ಅಳತೆಯ ನಿವೇಶನ ಮತ್ತು ಇದರಲ್ಲಿ ಕಟ್ಟಲಾಗಿರುವ 225 ಚದರ ಅಡಿ ಅಳತೆಯ ವಾಸದ ಮನೆ, ಬಾವಿ, ಇತ್ಯಾದಿ ಸೇರಿದಂತೆ, ಚಕ್ಕು ಬಂದಿ.

ಪೂರ್ವಕ್ಕೆ : ರಸ್ತೆ
ಪಶ್ಚಿಮಕ್ಕೆ : ಖಾಸಗಿ ಸ್ವತ್ತು
ಉತ್ತರಕ್ಕೆ : ಆಸ್ತಿ ಸಂಖ್ಯೆ : 35
ದಕ್ಷಿಣಕ್ಕೆ : ಆಸ್ತಿ ಸಂಖ್ಯೆ : 33

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 31-5-2004 ರಂದು ನೀಡಿರುತ್ತೇನೆ.

**ಬಸವೇಗೌಡ**

ಪಿ.ಆರ್. 858 ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ನ್ಯಾಯಾಲಯ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು-18**

**ದಾವಾ ಅರ್ಜಿ ಸಂಖ್ಯೆ.ಜೆಆರ್‌ಬಿ:ಡಿಐಎಸ್:12850:2003-04, ದಿನಾಂಕ: 3ನೇ ಜೂನ್ 2004**

**ವಾದಿ**

ಮುಖ್ಯ ಕಾರ್ಯನಿರ್ವಹಣಾಧಿಕಾರಿ,
ದಿ. ನ್ಯಾಷನಲ್ ಕೋ-ಆಪರೇಟಿವ್ ಬ್ಯಾಂಕ್ (ನಿ),
ನಂ.583/1, ಬುಲ್ ಟೆಂಪಲ್ ರಸ್ತೆ,
ಬೆಂಗಳೂರು-560 019

**ಪ್ರತಿವಾದಿಗಳು**

1. ಶ್ರೀಮತಿ ಜಯಲಕ್ಷ್ಮಿ ಕೋಂ ಶ್ರೀ ಮುನಿಭೈರಪ್ಪ, ನಂ.3857, ಮುನಿಸಿಪಲ್ ನಂ.53/1, 4ನೇ ಕ್ರಾಸ್, 'ಬಿ' ಬ್ಲಾಕ್, 2ನೇ ಹಂತ, ರಾಜಾಜಿನಗರ, ಬೆಂಗಳೂರು-21.
2. ಶ್ರೀ ಮುನಿಭೈರಪ್ಪ, ಬಿನ್ ಮುನಿಯಪ್ಪ, ನಂ.3857, ಮುನಿಸಿಪಲ್ ನಂ.53/1, 4ನೇ ಕ್ರಾಸ್, 'ಬಿ' ಬ್ಲಾಕ್, 2ನೇ ಹಂತ, ರಾಜಾಜಿನಗರ, ಬೆಂಗಳೂರು-21.
3. ಶ್ರೀ ಬಿ.ಎಂ. ಭೈರೇಶ್, ಬಿನ್ ಶ್ರೀ ಮುನಿಭೈರಪ್ಪ, ನಂ. 3857, ಮುನಿಸಿಪಲ್ ನಂ.53/1, 4ನೇ ಕ್ರಾಸ್, 'ಬಿ' ಬ್ಲಾಕ್, 2ನೇ ಹಂತ, ರಾಜಾಜಿನಗರ, ಬೆಂಗಳೂರು-21.
4. ಶ್ರೀ ಬಿ.ಎಂ. ಲೋಕೇಶ್, ಬಿನ್ ಶ್ರೀ ಮುನಿಭೈರಪ್ಪ, ನಂ.3857, ಮುನಿಸಿಪಲ್ ನಂ.53/1, 4ನೇ ಕ್ರಾಸ್, 'ಬಿ' ಬ್ಲಾಕ್, 2ನೇ ಹಂತ, ರಾಜಾಜಿನಗರ, ಬೆಂಗಳೂರು-21.

## 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರ ರೀತ್ಯಾ ಚರಾಸ್ತಿಯನ್ನು ಅಟ್ಯಾಚ್ ಮಾಡಿರುವ ಬಗ್ಗೆ ನೋಟೀಸು

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ಈ ನ್ಯಾಯಾಲಯದ ಮುಂದೆ ಹೂಡಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಗಳಿಂದ ಒಟ್ಟು ರೂ.8,47,369-00 ಗಳನ್ನು ದಿನಾಂಕ:1-10-2003 ರಿಂದ ಶೇಕಡಾ 14 ರಂತೆ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ದಾವಾ ಅರ್ಜಿಯನ್ನು ದಾವಾ ಸಂಖ್ಯೆ.ಜೆಆರ್‌ಬಿ:ಡಿಸ್:12850:2003-04 ರನ್ವಯ ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

2. ವಾದಿಯು ಅವರ ಈ ಮೇಲ್ಕಂಡ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ 1ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment before Judgement) ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. 1ನೇ ಪ್ರತಿವಾದಿಯು ಅವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ವತ್ತನ್ನು ಮಾರಾಟ ಮಾಡಲು/ಪರಭಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದೇ ಇದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್:ಡಿಕ್ರಿ ನೀಡಿದ್ದರೂ ಸದರಿ ಅವಾರ್ಡ್: ಡಿಕ್ರಿಯನ್ವಯ ಪ್ರತಿವಾದಿಯಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದೂ ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

3. ವಾದಿಯ ದಾವಾ ಅರ್ಜಿ ಮತ್ತು ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ, ವಾದಿಯು ಕಲಂ 103 ರಲ್ಲಿ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಅಲ್ಲದೇ 1ನೇ ಪ್ರತಿವಾದಿಯು ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ / ಪರಭಾರೆ ಮಾಡದಂತೆ ತಡೆಯದೇ ಇದ್ದಲ್ಲಿ, ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್/ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ. ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

4. ಮೇಲಿನ ಪರಿಸ್ಥಿತಿಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

### ಆದೇಶ

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರ.ಸಂ. ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ:21-11-2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಬಸವೇಗೌಡ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು 1ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

1ನೇ ಪ್ರತಿವಾದಿಯು ಒಂದು ವೇಳೆ ಈ ತೀರ್ಪಿಗೆ ಪೂರ್ವಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಚಿಸಿದಲ್ಲಿ ರೂ.8,47,369-00 ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ ಖಾತೆಗೆ ಜಮಾ ಮಾಡಿ ದಿನಾಂಕ:28-6-2004 ರ ಒಳಗಾಗಿ ಅಧಿಕೃತ ಚಲನ್ / ರಶೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಗಳು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ಅಟ್ಯಾಚ್‌ಮೆಂಟ್ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

### ಷೆಡ್ಯೂಲ್ ಆಸ್ತಿಯ ವಿವರ

ಬೆಂಗಳೂರು ನಗರ ರಾಜಾಜಿನಗರ 2ನೇ ಹಂತದಲ್ಲಿರುವ ಸುಬ್ರಹ್ಮಣ್ಯನಗರದ 4ನೇ ಅಡ್ಡರಸ್ತೆಯಲ್ಲಿರುವ ಆಸ್ತಿ ಸಂಖ್ಯೆ:3857, ಮುನಿಸಿಪಲ್ ನಂ.53/1, ಪೂರ್ವದಿಂದ ಪಶ್ಚಿಮಕ್ಕೆ 30 ಅಡಿ, ಉತ್ತರದಿಂದ ದಕ್ಷಿಣಕ್ಕೆ 59.6 ಅಡಿ ಅಳತೆಯ ನಿವೇಶನ ಹಾಗೂ ಸದರಿ ನಿವೇಶನದಲ್ಲಿ ಕಟ್ಟಿರುವ ವಾಸದ ಮನೆ, ವ್ಯಾಪಾರ ಮಳಿಗೆ, ಬಾವಿ, ಇತ್ಯಾದಿ ಸೇರಿದಂತೆ, ಚೆಕ್ಕುಬಂದಿ:

ಪೂರ್ವಕ್ಕೆ : ನಿವೇಶನ ಸಂಖ್ಯೆ.3858
ಪಶ್ಚಿಮಕ್ಕೆ : ನಿವೇಶನ ಸಂಖ್ಯೆ.3856
ಉತ್ತರಕ್ಕೆ : ರಸ್ತೆ
ದಕ್ಷಿಣಕ್ಕೆ : ನಿವೇಶನ ಸಂಖ್ಯೆ.3877

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 3-6-2004 ರಂದು ನೀಡಿರುತ್ತೇನೆ.

ಬಸವೇಗೌಡ
ಪಿ.ಆರ್. 859 ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು.

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಜಂಟಿ ನಿಬಂಧಕರ ನ್ಯಾಯಾಲಯ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು-18

**ವಾದಿ**

ಪ್ರಧಾನ ವ್ಯವಸ್ಥಾಪಕರು,
ಶ್ರೀ ಸುಬ್ರಹ್ಮಣ್ಯೇಶ್ವರ ಕೋ-ಆಪರೇಟಿವ್ ಬ್ಯಾಂಕ್ ನಿಯಮಿತ, ನಂ. 565, ಆನಂದರಾಮ ಕಾಂಪ್ಲೆಕ್ಸ್,
ಅವೆನ್ಯೂ ರಸ್ತೆ, ಬೆಂಗಳೂರು-560 002.

**ಪ್ರತಿವಾದಿಗಳು**

1. ಮೆ.ಎಸ್.ಆರ್.ಎಸ್. ಪೈಂಟ್ ಹೌಸ್, ನಂ.89 ಮತ್ತು 72, ರಾಗಿಪೇಟೆ, ಗುಂಡೋಪಂತ್ ರಸ್ತೆ, ಬೆಂಗಳೂರು-2.
2. ಶ್ರೀ ಎಸ್.ಆರ್. ಸುರೇಶ್, ಬಿನ್ ಲೇಟ್ ಎಸ್. ರಾಮಯ್ಯ, 1ನೇ ಪ್ರತಿವಾದಿಯ ಪಾಲುದಾರರು, ನಂ.3113, 19ನೇ ಅಡ್ಡರಸ್ತೆ, ಬನಶಂಕರಿ 3ನೇ ಹಂತ, 2ನೇ ಮೈನ್, ಕೆ.ಆರ್. ರಸ್ತೆ, ಬೆಂಗಳೂರು-70.
3. ಶ್ರೀ ಎಸ್.ಆರ್. ರವಿ ಬಿನ್ ಲೇಟ್ ಎಸ್. ರಾಮಯ್ಯ, 1ನೇ ಪ್ರತಿವಾದಿಯ ಪಾಲುದಾರರು, ನಂ.116, 1ನೇ ಮಹಡಿ, 1ನೇ ಮೈನ್, ಕೆ.ಎಸ್.ಆರ್.ಟಿ.ಸಿ. ಕಾಲೋನಿ, 2ನೇ ಹಂತ, ಜೆ.ಪಿ. ನಗರ, ಬೆಂಗಳೂರು-78.
4. ಶ್ರೀಮತಿ ಲಕ್ಷ್ಮಿ ಸುರೇಶ್, ಕೋಂ ಎಸ್.ಆರ್. ಸುರೇಶ್, 1ನೇ ಪ್ರತಿವಾದಿಯ ಪಾಲುದಾರರು, ನಂ.3113, 19ನೇ ಅಡ್ಡರಸ್ತೆ, ಬನಶಂಕರಿ 3ನೇ ಹಂತ, 2ನೇ ಮೈನ್., ಕೆ.ಆರ್. ರಸ್ತೆ, ಬೆಂಗಳೂರು-560 070.
5. ಶ್ರೀಮತಿ ಚಂದ್ರಮ್ಮ ರವಿ, ನಂ.116, 1ನೇ ಮಹಡಿ, 1ನೇ ಮೈನ್, ಕೆ.ಎಸ್.ಆರ್.ಟಿ.ಸಿ. ಕಾಲೋನಿ, 2ನೇ ಹಂತ, ಜೆ.ಪಿ. ನಗರ, ಬೆಂಗಳೂರು-78.
6. ಶ್ರೀ ಎಸ್. ವೆಂಕಟೇಶ ಬಾಬು, ನಂ.391/8, ಶ್ರೀ ರಾಮನಿಲಯ, 14ನೇ ಮೈನ್, ಎಂ.ಸಿ. ಲೇಔಟ್, ವಿಜಯನಗರ, ಬೆಂಗಳೂರು-40.

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ಈ ನ್ಯಾಯಾಲಯದ ಮುಂದೆ ಸಲ್ಲಿಸಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಗಳಿಂದ ಒಟ್ಟು ರೂ.46,39,051-00 ಗಳನ್ನು ದಿನಾಂಕ:10-2-2004 ರಿಂದ ಶೇಕಡಾ 18 ರಂತೆ ಬಡ್ಡಿ ಮತ್ತು ಶೇಕಡಾ 2 ರಂತೆ ಸುಸ್ತಿ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ವಾದಿಯು ಅವರ ಈ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ಅಂತಿಮ ತೀರ್ಪಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment before Judgement) ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. ಪ್ರತಿವಾದಿಗಳು ಅವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ವತ್ತನ್ನು ಮಾರಾಟ ಮಾಡಲು/ಪರಭಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದೇ ಇದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್:ಡಿಕ್ರಿ ನೀಡಿದರೂ ಸದರಿ ಅವಾರ್ಡ್: ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದೂ ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ. ಈ ನ್ಯಾಯಾಲಯವು ವಾದಿಯ ದಾವಾ ಅರ್ಜಿ ಮತ್ತು ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಯನ್ನು ಕೂಲಂಕುಶವಾಗಿ ಪರಿಶೀಲಿಸಿ, ದಿನಾಂಕ:24-2-2004 ರಂದು ಪ್ರತಿವಾದಿಗಳಿಗೆ ನೀಡಿರುವ ನೋಟೀಸಿನಲ್ಲಿ ಕಲಂ 103ರ ರೀತ್ಯಾ ಪ್ರತಿವಾದಿಗಳ ಹೆಸರಿನಲ್ಲಿರುವ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವಜಪ್ತಿ ಮಾಡಿ ಆದೇಶ ನೀಡಿರುತ್ತದೆ. ಅಲ್ಲದೆ ಪ್ರತಿವಾದಿಗಳು ಈ ನ್ಯಾಯಾಲಯವು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿರುವ ಸದರಿ ಆದೇಶವನ್ನು ಹಿಂದಕ್ಕೆ ಪಡೆಯಬೇಕೆಂದು ಇಚ್ಛಿಸಿದಲ್ಲಿ ರೂ.46,39,051-00 ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ ಖಾತೆಗೆ ಜಮಾ ಮಾಡಿ ದಿನಾಂಕ:22-3-2004ರ ಒಳಗಾಗಿ ಅಧಿಕೃತ ಚಲನ್:ರಸೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿತ್ತು.

ಆದರೆ, ವಾದಿಯು ಈ ನ್ಯಾಯಾಲಯಕ್ಕೆ ಸಲ್ಲಿಸಿರುವ ದಿನಾಂಕ:24-3-2004ರ ಪತ್ರದಲ್ಲಿ ಪ್ರತಿವಾದಿಗಳು ಈ ನ್ಯಾಯಾಲಯದ ದಿನಾಂಕ:24-2-2004ರ ಆದೇಶದ ರೀತ್ಯಾ ವಾದಿ ಬ್ಯಾಂಕಿಗೆ ಯಾವುದೇ ಹಣ ಪಾವತಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ. ಆ ಮೂಲಕ ಪ್ರತಿವಾದಿಗಳು ಈ ನ್ಯಾಯಾಲಯವು ಮೇಲ್ಕಂಡ ಆದೇಶದಲ್ಲಿ ವಿಧಿಸಿರುವ ಷರತ್ತನ್ನು ಪಾಲಿಸಲು ವಿಫಲರಾಗಿರುತ್ತಾರೆ.

ಆದ್ದರಿಂದ ಈ ನ್ಯಾಯಾಲಯವು ದಿನಾಂಕ:24-2-2004 ರಂದು ಷರತ್ತಿಗೆ ಒಳಪಟ್ಟು ಹೊರಡಿಸಿರುವ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲು ತೀರ್ಮಾನಿಸಿದೆ.

ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

## ಆದೇಶ

ಪ್ರಸ್ತಾವನೆಯಲ್ಲಿ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103(2) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಕ್ರ.ಸಂ. ಸಿಎಂಡಬ್ಲ್ಯೂ:69:ಸಿಎಲ್ಎಂ:2001 ದಿನಾಂಕ:21-11-2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಬಸವೇಗೌಡ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಪ್ರತಿವಾದಿಗಳ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿರುವ ಈ ನ್ಯಾಯಾಲಯದ ಆದೇಶ ಕ್ರಮಾಂಕ:ಜೆಆರ್‌ಬಿ:ಡಿಐಎಸ್:9549:2003-04 ದಿನಾಂಕ:24-2-2004ನ್ನು ವಾದಿಯ ಈ ದಾವಾ ಅರ್ಜಿಯ ಇತ್ಯರ್ಥಕ್ಕೆ ಒಳಪಟ್ಟು ಸ್ಥಿರೀಕರಿಸಿ, ಈ ಮೂಲಕ ಆದೇಶಿಸಿರುತ್ತೇನೆ.

## ಷೆಡ್ಯೂಲ್ ಆಸ್ತಿಯ ವಿವರ

## ಷೆಡ್ಯೂಲ್-I

ಬೆಂಗಳೂರು ನಗರ (ಬೆಂಗಳೂರು-2) ರಾಗೀಪೇಟೆಯ ಓಲ್ಡ್ ಕಸಾಯಿ ರಸ್ತೆಯಲ್ಲಿರುವ ಮುನಿಸಿಪಲ್ ಖಾತೆ ನಂ.75, 1ನೇ ಮಹಡಿ, ಕಾಸಿಮ್ ಬಿಲ್ಡಿಂಗ್ ಮತ್ತು ಪೂರ್ವದಿಂದ ಪಶ್ಚಿಮಕ್ಕೆ: 23 ಅಡಿ 3 ಇಂಚು, ಉತ್ತರದಿಂದ ದಕ್ಷಿಣಕ್ಕೆ:11 ಅಡಿ 5 ಇಂಚು ಅಳತೆಯ ನಿವೇಶನಕ್ಕೆ ಚಕ್ಕುಬಂದಿ:

| | | |
|---|---|---|
| ಉತ್ತರ | : | ಗ್ರೌಂಡ್ ಫ್ಲೋರ್ ಮತ್ತು ಫಸ್ಟ್ ಫ್ಲೋರ್: ಕಿರಿದಾದ ಲೇನ್ ಇದರ ಮೂಲಕ ವಾಟರ್ ಪೈಪ್‌ಗಳು ಮತ್ತು ಫ್ಲಷ್‌ಔಟ್‌ಗಳನ್ನು ಹಾಕಲಾಗಿದೆ ಮತ್ತು ಯೂನಿಯನ್ ಹಾರ್ಡ್‌ವೇರ್ಸ್. |
| ದಕ್ಷಿಣಕ್ಕೆ | : | ಗ್ರೌಂಡ್ ಫ್ಲೋರ್, ಶಾಪ್ ನಂ.73, ಶ್ರೀ ಎಂ. ಮಹಮ್ಮದ್ ಇದ್ರೀಸ್ ಮತ್ತು ಎಂ. ಮಹಮ್ಮದ್ ಆಲಿ ಇವರಿಗೆ ಮಾರಾಟವಾಗಿದೆ. ಫಸ್ಟ್ ಫ್ಲೋರ್: ಫಸ್ಟ್ ಫ್ಲೋರ್‌ನ ರೂಮ್ ಪೋರ್ಷನ್ ಶ್ರೀ ಎಂ. ಮಹಮ್ಮದ್ ಇದ್ರೀಸ್ ಮತ್ತು ಎಂ. ಮಹಮ್ಮದ್ ಆಲಿ ಇವರಿಗೆ ಮಾರಾಟವಾಗಿದೆ. |
| ಪೂರ್ವಕ್ಕೆ | : | ಗ್ರೌಂಡ್ ಫ್ಲೋರ್: ಖಾಸಗಿ ಆಸ್ತಿ (ಈ ಹಿಂದೆ ಶ್ರೀಮತಿ ಸಮೂರಬೀಗೇ ಸೇರಿತ್ತು) ಫಸ್ಟ್ ಫ್ಲೋರ್: ಕಾಮನ್ ಟೆರೇಸ್ 8 ಅಡಿ 3 ಇಂಚು x 31 ಅಡಿ 6 ಇಂಚು ಅಳತೆ ಮತ್ತು ಕಾಮನ್ ಬಾತ್ ಅಂಡ್ ಲ್ಯಾವೇಟರಿ. |
| ಪಶ್ಚಿಮಕ್ಕೆ | : | ಗ್ರೌಂಡ್ ಫ್ಲೋರ್: ಓಲ್ಡ್ ಕಸಾಯಿ ರಸ್ತೆ, ಫಸ್ಟ್ ಫ್ಲೋರ್: ಕಾಮನ್ ಓಪನ್ ಬಾಲ್ಕನಿ ಅಳತೆ 5 ಅಡಿ 3 ಇಂಚು 31 ಅಡಿ 6 ಇಂಚು ಇದಾದ ನಂತರ ಓ.ಕೆ. ರಸ್ತೆ. |

## ಷೆಡ್ಯೂಲ್-II

ಬೆಂಗಳೂರು ನಗರ (ಬೆಂಗಳೂರು-2) ರಾಗೀಪೇಟೆ, ಕಸಾಯಿ ರಸ್ತೆಯಲ್ಲಿರುವ ಮುನಿಸಿಪಲ್ ಖಾತೆ ನಂ.72, ಗ್ರೌಂಡ್ ಫ್ಲೋರ್ ಕಾಮನ್ ಬಿಲ್ಡಿಂಗ್ ಮತ್ತು ಪೂರ್ವದಿಂದ ಪಶ್ಚಿಮಕ್ಕೆ: 23 ಅಡಿ 3 ಇಂಚು, ಪೂರ್ವ ಭಾಗಕ್ಕೆ ಕಟ್ಟಲಾಗಿರುವ ಸಂಪೂರ್ಣ ಗೋಡೆ ಸೇರಿದಂತೆ, ಉತ್ತರದಿಂದ ದಕ್ಷಿಣಕ್ಕೆ:11 ಅಡಿ 8 ಇಂಚು, ಉತ್ತರ ಭಾಗಕ್ಕೆ ಕಟ್ಟಲಾಗಿರುವ ಸಂಪೂರ್ಣ ಗೋಡೆ ಮತ್ತು ಮೆ: ನೇತಾ ಎಂಟರ್ ಪ್ರೈಸಸ್ ಪಕ್ಕಕ್ಕೆ ದಕ್ಷಿಣ ಭಾಗದಲ್ಲಿ ಕಟ್ಟಲಾಗಿರುವ ಅರ್ಧ ಅಡಿ ಗೋಡೆ ಸೇರಿದಂತೆ ಚಕ್ಕುಬಂದಿ

| | | |
|---|---|---|
| ಉತ್ತರಕ್ಕೆ | : | ಗ್ರೌಂಡ್ ಫ್ಲೋರ್ ಮತ್ತು ಫಸ್ಟ್ ಫ್ಲೋರ್: ಕಿರಿದಾದ ಲೇನ್ ಇದರ ಮೂಲಕ ವಾಟರ್ ಪೈಪ್‌ಗಳು ಮತ್ತು ಫ್ಲಷ್‌ಔಟ್‌ಗಳನ್ನು ಹಾಕಲಾಗಿದೆ ಮತ್ತು ಯೂನಿಯನ್ ಹಾರ್ಡ್‌ವೇರ್ಸ್. |
| ದಕ್ಷಿಣಕ್ಕೆ | : | ಗ್ರೌಂಡ್ ಫ್ಲೋರ್, ಶ್ರೀ ಎಂ. ಮಹಮ್ಮದ್ ಇದ್ರೀಸ್ ಮತ್ತು ಎಂ. ಮಹಮ್ಮದ್ ಆಲಿ ಇವರಿಗೆ ಮಾರಾಟ ಮಾಡಿರುವ ಶಾಪ್ ನಂ.73, ಫಸ್ಟ್ ಫ್ಲೋರ್: ಶ್ರೀ ಎಂ. ಮಹಮ್ಮದ್ ಇದ್ರೀಸ್ ಮತ್ತು ಎಂ. ಮಹಮ್ಮದ್ ಆಲಿ ಇವರಿಗೆ ಮಾರಾಟ ಮಾಡಿರುವ ಇದೇ ಫಸ್ಟ್ ಫ್ಲೋರ್‌ನಲ್ಲಿರುವ ರೂಮ್‌ನ ಭಾಗ. |
| ಪೂರ್ವಕ್ಕೆ | : | ಗ್ರೌಂಡ್ ಫ್ಲೋರ್: ಖಾಸಗಿ ಆಸ್ತಿ (ಈ ಹಿಂದೆ ಶ್ರೀಮತಿ ಸಮೂರಬೀಗೇ ಸೇರಿತ್ತು) |
| ಪಶ್ಚಿಮಕ್ಕೆ | : | ಗ್ರೌಂಡ್ ಫ್ಲೋರ್: ಓಲ್ಡ್ ಕಸಾಯಿ ರಸ್ತೆ, ಫಸ್ಟ್ ಫ್ಲೋರ್: 5 ಅಡಿ 3 ಇಂಚು 31 ಅಡಿ 6 ಇಂಚು ಅಳತೆಯ ಕಾಮನ್ ಓಪನ್ ಬಾಲ್ಕನಿ ಇದಾದ ನಂತರ ಓ.ಕೆ. ರಸ್ತೆ. |

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 31-5-2004 ರಂದು ನೀಡಿರುತ್ತೇನೆ.

ಬಸವೇಗೌಡ

ಪಿ.ಆರ್. 860 ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು.

## ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಸಿರುಗುಪ್ಪ ತಾಲ್ಲೂಕು ಬಳ್ಳಾರಿ ಜಿಲ್ಲೆ

## ಅಧಿಸೂಚನೆ ಸಂಖ್ಯೆ: ತಾಸಕಅ:ಕಮಾಹಅ:2000-02:ಸಿಆರ್-2:04-05, ದಿನಾಂಕ: 31ನೇ ಮೇ 2004

**ವಿಷಯ:** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ಹಾಗೂ 2002ರ ಅನುಷ್ಠಾನದ ಬಗ್ಗೆ.

**ಉಲ್ಲೇಖ:** ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಆಸುಇ:56:ಯೋಮಸ:02:(1)ದಿನಾಂಕ:18.7.2002.

ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2002 ಈಗಾಗಲೇ ಜಾರಿಗೆ ಬಂದಿದ್ದು, ಸದರಿ ಅಧಿನಿಯಮದ ರೀತ್ಯಾ ಎಲ್ಲಾ ಸಾರ್ವಜನಿಕ ಪ್ರಾಧಿಕಾರಿಗಳು (ಕಛೇರಿಗಳು) ಅಧಿನಿಯಮದ ಸೆಕ್ಷನ್ 2(ಎ) ಅಡಿಯಲ್ಲಿ ವ್ಯಾಖ್ಯಾನಿಸಿರುವಂತೆ, ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಗಳನ್ನು ನೇಮಿಸಬೇಕಾಗಿರುತ್ತದೆ. ಅದರಂತೆ ತಾಲ್ಲೂಕು ಮಟ್ಟದ ಹಂತದಲ್ಲಿ ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳಾಗಿ ಈ ಕೆಳಗಿನಂತೆ ನೇಮಿಸಲಾಗಿದೆ.

| | ಸಕ್ಷಮ ಪ್ರಾಧಿಕಾರ | ಅಪೀಲು ಪ್ರಾಧಿಕಾರ |
|---|---|---|
| ತಾಲ್ಲೂಕು ಮಟ್ಟದಲ್ಲಿ | ಕಛೇರಿ ಅಧೀಕ್ಷಕರು | ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು |

ಸರ್ಕಾರದ ಅಧಿನಿಯಮದ ಸೆಕ್ಷನ್ 3(ಡಿ) ಅಡಿಯಲ್ಲಿ ನಿಗದಿಪಡಿಸಿದಂತೆ, ಈ ಕೆಳಗೆ ತಿಳಿಸಿರುವ 4 ಶೀರ್ಷಿಕೆಗಳಲ್ಲಿ ತಿಳಿಸಿರುವ ವಿವರಗಳನ್ನು ಸಾರ್ವಜನಿಕ ಪ್ರಕಟಣೆಗಾಗಿ ಈ ಕೆಳಗಿನಂತೆ ತಿಳಿಯಪಡಿಸಿದೆ.

**1) ಇಲಾಖೆಯ ಸಂಘಟನೆ, ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು**

ತಾಲ್ಲೂಕು ಹಂತದಲ್ಲಿ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯು ತಾಲ್ಲೂಕು ಪಂಚಾಯಿತಿಯ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು ಕಛೇರಿಯ ಮುಖ್ಯಸ್ಥರಾಗಿರುತ್ತಾರೆ. ಇವರಿಗೆ ಸಹಕರಿಸಲು ಸದರಿ ಕಛೇರಿಯಲ್ಲಿ ಈ ಕೆಳಗಿನಂತೆ ಪೂರಕ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

1. ಕಛೇರಿ ಅಧೀಕ್ಷಕರು - 1 ಹುದ್ದೆ
2. ಪ್ರಥಮ ದರ್ಜೆ ಸಹಾಯಕರು - 1 ಹುದ್ದೆ
3. ದ್ವಿತೀಯ ದರ್ಜೆ ಸಹಾಯಕರು - 1 ಹುದ್ದೆ
4. ಬೆರಳಚ್ಚುಗಾರರು - 1 ಹುದ್ದೆ (ಹುದ್ದೆಖಾಲಿ ಇದೆ)
5. ಗ್ರೂಪ್ 'ಡಿ' ನೌಕರರು - 1 ಹುದ್ದೆ

**ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯಡಿಯಲ್ಲಿ ಬರುವ ಸಂಸ್ಥೆಗಳ ಹೆಸರು ಮತ್ತು ವಿವರ**

| ಕ್ರ. ಸಂ. | ಸಂಸ್ಥೆಗಳ ಹೆಸರು | ಸಂಖ್ಯಾಬಲ |
|---|---|---|
| 1. | ಮೆಟ್ರಿಕ್ ಪೂರ್ವ ಬಾಲಕಿಯರ ನಿಲಯ, ಸಿರಗುಪ್ಪ | 60 |
| 2. | ಮೆಟ್ರಿಕ್ ಪೂರ್ವ ಬಾಲಕರ ನಿಲಯ, ಸಿರುಗುಪ್ಪ | 135 |
| 3. | ಮೆಟ್ರಿಕ್ ಪೂರ್ವ ಬಾಲಕರ ನಿಲಯ, ತೆಕ್ಕಲಗೋಟೆ | 105 |
| 4. | ಮೆಟ್ರಿಕ್ ಪೂರ್ವ ಬಾಲಕರ ನಿಲಯ, ರಾರಾವಿ | 55 |
| 5. | ಮೆಟ್ರಿಕ್ ಪೂರ್ವ ಬಾಲಕರ ನಿಲಯ, ಶಿರಿಗೇರಿ | 50 |
| 6. | ಮೆಟ್ರಿಕ್ ನಂತರದ ಬಾಲಕರ ನಿಲಯ, ಸಿರುಗುಪ್ಪ | 50 |
| 7. | ಪರಿಶಿಷ್ಟ ಪಂಗಡದ ಆಶ್ರಮ ಶಾಲೆ, ತೆಕ್ಕಲಕೋಟೆ | 100 |
| 8. | ಮಹಿಳಾ ಮತ್ತು ಮಕ್ಕಳ ಕಲ್ಯಾಣ ಕೇಂದ್ರ 6ನೇ ವಾರ್ಡ್, ಸಿರುಗುಪ್ಪ | 100 |
| 9. | ಮಹಿಳಾ ಮತ್ತು ಮಕ್ಕಳ ಕಲ್ಯಾಣ ಕೇಂದ್ರ 8ನೇ ವಾರ್ಡ್, ಸಿರುಗುಪ್ಪ | |

ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ, ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದಲ್ಲಿ ಪರಿಶಿಷ್ಟ ಜಾತಿ:ಪರಿಶಿಷ್ಟ ವರ್ಗಗಳ ಸರ್ವತೋಮುಖ ಅಭಿವೃದ್ಧಿಗಾಗಿ ಈ ಕೆಳಕಂಡ ಹಲವಾರು ಶೈಕ್ಷಣಿಕ ಹಾಗೂ ಆರ್ಥಿಕ ನೆರವಿನ ಯೋಜನೆಗಳನ್ನು ಅನುಷ್ಠಾನ ಗೊಳಿಸಲಾಗುತ್ತಿದೆ.

1) ಕಾನೂನು ಪದವೀಧರರಿಗೆ ಧನಸಹಾಯ.
2) ನರ್ಸರಿ ಮತ್ತು ಮಹಿಳಾ ಕಲ್ಯಾಣ ಕೇಂದ್ರಗಳು.
3) ಕಟ್ಟಡಗಳ ನಿರ್ವಹಣೆ.
4) ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ಶಿಷ್ಯವೇತನ.
5) ಎಸ್.ಎಸ್.ಎಲ್.ಸಿ. ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ನಗದು ಬಹುಮಾನ ಹಣ.
6) ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ.
7) ಪ್ರತಿಭಾ ವಿದ್ಯಾರ್ಥಿವೇತನ.
8) ಮೆಟ್ರಿಕ್‌ಪೂರ್ವ ವಿದ್ಯಾರ್ಥಿನಿಲಯಗಳು.
9) ಪ.ವರ್ಗದ ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ.
10) ಹೆಚ್ಚಿನ ಊಟ ಮತ್ತು ವಸತಿ ವೆಚ್ಚಗಳ ಸಹಾಯ.
11) ಅನೈರ್ಮಲ್ಯ ವೃತ್ತಿಗಳಲ್ಲಿ ತೊಡಗಿರುವ ಪೋಷಕರ ಮಕ್ಕಳಿಗೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ.
12) 1 ರಿಂದ 4ನೇ ತರಗತಿಯ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ.
13) ಅಸ್ಪೃಶ್ಯತಾ ನಿವಾರಣೆ.
14) ದೌರ್ಜನ್ಯಕ್ಕೆ ಒಳಪಟ್ಟ ಪರಿಶಿಷ್ಟ ಜಾತಿ : ಪರಿಶಿಷ್ಟ ಪಂಗಡದವರಿಗೆ ಪರಿಹಾರ.
15) ಜಾತಿ ಪರಿಶೀಲನೆ.
16) ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪಯೋಜನೆ.
17) ಮೆಟ್ರಿಕ್ ನಂತರದ ಪರೀಕ್ಷೆಗಳಲ್ಲಿ ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ನಗದು ಬಹುಮಾನ ಹಣ.
18) 6 ರಿಂದ 7 ಹಾಗೂ 8 ರಿಂದ 10ನೇ ವರ್ಗದ ಪ.ಜಾ./ಪ. ವರ್ಗದ ಹೆಣ್ಣು ಮಕ್ಕಳಿಗೆ ಪ್ರೋತ್ಸಾಹ ಧನ.
19) ಅಂತರ್‌ಜಾತಿ ವಿವಾಹವಾದ ದಂಪತಿಗಳಿಗೆ ಪ್ರೋತ್ಸಾಹಧನ.

**2) ಅಧಿಕಾರಿಗಳು ಮತ್ತು ನೌಕರರ ಅಧಿಕಾರಗಳು ಮತ್ತು ಕರ್ತವ್ಯಗಳು ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯವಿಧಾನ.**

ಮೇಲೆ ವಿವರಿಸಿರುವಂತೆ, ಶೀರ್ಷಿಕೆ (1)ರಲ್ಲಿ ತಿಳಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಎಲ್ಲಾ ವಿಷಯಗಳ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರವು ತಾಲ್ಲೂಕು ಮಟ್ಟದಲ್ಲಿ ಸಂಬಂಧಿಸಿದ ತಾಲ್ಲೂಕು ಪಂಚಾಯತ್‌ನ ಕಾರ್ಯ ನಿರ್ವಹಣಾ ಅಧಿಕಾರಿಗಳಿಗೆ ಇರುತ್ತದೆ.

**ಅಧಿಕಾರಿಗಳ ಕರ್ತವ್ಯಗಳು: ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕರ್ತವ್ಯಗಳು.**

1. ತಾಲ್ಲೂಕಿನ ಪರಿಶಿಷ್ಟ ಜಾತಿ:ಪರಿಶಿಷ್ಟ ವರ್ಗಗಳ ಜನರ ಕಲ್ಯಾಣ ಕಾರ್ಯಕ್ರಮಗಳ ಅನುಷ್ಠಾನ ಅಧಿಕಾರಿಯಾಗಿ ಕಾರ್ಯನಿರ್ವಹಿಸುವುದು.
2. ಪ್ರತಿ ತಿಂಗಳು ಕನಿಷ್ಟ 15 ದಿನ ಪ್ರವಾಸಮಾಡುವುದು ಹಾಗೂ 10 ದಿನ ಹಳ್ಳಿಗಳಲ್ಲಿ ವಾಸ್ತವ್ಯ ಮಾಡುವುದು ಹಾಗೂ ಪರಿಶಿಷ್ಟ ಜಾತಿ:ಪರಿಶಿಷ್ಟ ವರ್ಗದ ಜನರ ಕಾಲೋನಿಗಳಿಗೆ ತಪ್ಪದೇ ಭೇಟಿನೀಡುವುದು.
3. ಇಲಾಖೆಯ ವಾರ್ಷಿಕ ಯೋಜನೆಯನ್ನು ತಯಾರಿಸಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್ ಹಾಗೂ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳವರಿಂದ ಒಪ್ಪಿಗೆ ಪಡೆದು ಹಣ ಬಿಡುಗಡೆ ಮಾಡಿಸಿಕೊಳ್ಳುವುದು.
4. ತಾಲ್ಲೂಕಿನ ಸಮಾಜ ಕಲ್ಯಾಣ ಇಲಾಖೆಯ ಸಂಸ್ಥೆಗಳ ಮುಖ್ಯಸ್ಥರ ಕಾರ್ಯನಿರ್ವಹಣೆಯನ್ನು ಪರಿಶೀಲಿಸುವುದು ಹಾಗೂ ಕಾರ್ಯಾಲಯದ ಸಿಬ್ಬಂದಿಯವರ ಕೆಲಸಗಳನ್ನು ತಪಾಸಣೆ ಮಾಡುವುದು.
5. ಮೇಲಾಧಿಕಾರಿಗಳಿಗೆ ತಿಂಗಳ, 3 ತಿಂಗಳ, ಅರ್ಧ ವರ್ಷದ ಹಾಗೂ ವರ್ಷದಲ್ಲಿ ಸಾಧಿಸಿದ ಪ್ರಗತಿ ಪತ್ರಿಕೆಗಳನ್ನು ಸಲ್ಲಿಸುವುದು.
6. ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳಿಗೆ ತಿಂಗಳ ಖರ್ಚಿನ ಮಾಹಿತಿ, ಪಿರಾಡಿಕಲ್ಸ್ ಮಾಹಿತಿ ಹಾಗೂ ಚೆಕ್ಕುಗಳ ಶಿಷ್ಯವೇತನ ಮಂಜೂರು ಮಾಡಿ ಚೆಕ್ ಅಕೌಂಟ್ಸ್ ಮಾಹಿತಿ ತಯಾರಿಸಿ ಸಲ್ಲಿಸುವುದು.
7. ತಾಲ್ಲೂಕಿನಲ್ಲಿರುವ ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗದ ಶಾಲೆಗಳಿಗೆ ಹೋಗುವ ಮಕ್ಕಳ ಮಾಹಿತಿಯನ್ನು ಹಾಗೂ ಮೂಲಭೂತ ಮಾಹಿತಿಯನ್ನು ತಯಾರಿಸಿ ಇಡುವುದು.

**ಶಿಕ್ಷಣ:-**

8. ಪರಿಶಿಷ್ಟ ಜಾತಿ:ಪರಿಶಿಷ್ಟ ವರ್ಗದ 1 ರಿಂದ 10ನೇ ತರಗತಿಯ ಮೆಟ್ರಿಕ್ ಪೂರ್ವ ಶಿಷ್ಯವೇತನ ಹಾಗೂ ಮೆಟ್ರಿಕ್ ನಂತರದ ಶಿಷ್ಯವೇತನ ಮಂಜೂರು ಮಾಡುವುದು ಹಾಗೂ ಅದರ ಲೆಕ್ಕಪತ್ರ ಇಡುವುದು ಮತ್ತು ಶಿಷ್ಯವೇತನ ಹಂಚಿಕೆಯಾದ ಪಾವತಿಗಳನ್ನು ಇಡುವುದು.
9. ತಾಲ್ಲೂಕಿನಲ್ಲಿಯ ಎಲ್ಲಾ ಸಮಾಜ ಕಲ್ಯಾಣ ಇಲಾಖೆಯ ಸಂಸ್ಥೆಗಳ ಪರಿವೀಕ್ಷಣೆ ಮಾಡುವುದಲ್ಲದೆ, ಅನುದಾನಿತ ಮೆ.ಪೂರ್ವ ಮತ್ತು ಮೆ.ನಂತರದ ವಸತಿ ನಿಲಯಗಳನ್ನು ವೀಕ್ಷಣೆ ಮಾಡುವುದು.
10. ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಪ್ರಥಮ ಬಾರಿಗೆ ಪ್ರಥಮ ದರ್ಜೆಯಲ್ಲಿ ಪಾಸಾದ ವಿದ್ಯಾರ್ಥಿಗಳಿಗೆ ನಗದು ಬಹುಮಾನ ಹಣ ವಿತರಣೆ ಮಾಡುವುದು.
11. ಪರಿಶಿಷ್ಟ ಜಾತಿ:ಪರಿಶಿಷ್ಟ ವರ್ಗದ ಶಾಲೆಗೆ ಹೋಗುವ ಮಕ್ಕಳಿಗೆ ಪುಕ್ಕಟೆಯಾಗಿ ಕೊಡುವ ಸಮವಸ್ತ್ರ ಹಾಗೂ ಪಠ್ಯ ಪುಸ್ತಕಗಳನ್ನು ಹಾಗೂ ಇತರೆ ಶೈಕ್ಷಣಿಕ ಸಹಾಯವನ್ನು ಸರಿಯಾಗಿ ವಿತರಣೆ ಮಾಡಿದ್ದಾರೆಯೇ ಹೇಗೆ ಅನ್ನುವುದನ್ನು ಖಚಿತಪಡಿಸಿಕೊಳ್ಳುವುದು.
12. ಪರಿಶಿಷ್ಟ ಜಾತಿಯ ಜನರ ಕಾಲೋನಿಯಲ್ಲಿ ವಯಸ್ಕರ ಶಿಕ್ಷಣ ಯುವಜನ ಇಲಾಖೆ ಹಾಗೂ ಸಹಕಾರ ಇಲಾಖೆಯ ವತಿಯಿಂದ ಸಂಸ್ಥೆಗಳನ್ನು ಸ್ಥಾಪಿಸುವುದರಲ್ಲಿ ಸಹಕಾರ ನೀಡುವುದು.
13. ಶಿಕ್ಷಣ ಸಂಸ್ಥೆಗಳಲ್ಲಿ ಶಿಷ್ಯವೇತನ ಸರಿಯಾಗಿ ವಿತರಣೆ ಮಾಡಿದ ಬಗ್ಗೆ ಹಾಗೂ ಬುಕ್ ಬ್ಯಾಂಕ್ ಯೋಜನೆಯಲ್ಲಿ ನೀಡಿದ ಸವಲತ್ತುಗಳನ್ನು ಉಪಯೋಗಿಸಿದ ಬಗ್ಗೆ ತಪಾಸಣೆ ಮಾಡುವುದು.
14. ವಿದ್ಯಾರ್ಥಿನಿಲಯಗಳ ಕಟ್ಟಡ ಕಟ್ಟುವುದು, ಮಿನಿ ಅಂಬೇಡ್ಕರ್ ಭವನ ಕಟ್ಟುವುದು, ಕಲ್ಯಾಣ ಮಂದಿರ ಕಟ್ಟುವುದು ಹಾಗೂ ಶಾಲಾ ಕಟ್ಟಡಗಳನ್ನು ಕಟ್ಟುವುದನ್ನು ಪರಿಶೀಲಿಸುವುದು ಹಾಗೂ ಕಾರ್ಯಗತ ಮಾಡುವುದು.
15. ಟಿ.ಎಸ್.ಪಿ. ಯೋಜನೆ ಹೊರತುಪಡಿಸಿ ಹುಡ್ಕೋ ಎನ್.ಆರ್.ಇ.ಪಿ, ಪಿ.ಎಲ್.ಬಿ.ಆರ್;ಎಲ್.ಸಿ.ಹೆಚ್. ಯೋಜನೆಯಡಿಯಲ್ಲಿ ಯೋಗ್ಯ ಫಲಾನುಭವಿಗಳನ್ನು ಗುರುತಿಸುವುದು ಹಾಗೂ ಆಯ್ಕೆ ಮಾಡಿ ಸಂಬಂಧಿಸಿದ ಇಲಾಖೆಗೆ ಒದಗಿಸುವುದು.
16. ಪರಿಶಿಷ್ಟ ಜಾತಿ:ಪರಿಶಿಷ್ಟ ವರ್ಗದ ಜನರ ಮೇಲೆ ನಡೆದ ದೌರ್ಜನ್ಯ ಪ್ರಕರಣಕ್ಕೆ ಸಂಬಂಧಿಸಿದಂತೆ ಸಿ.ಆರ್. ಸೆಲ್ಲಿನ ಅಧಿಕಾರಿಗಳೊಂದಿಗೆ ಸಹಕರಿಸುವುದು ಹಾಗೂ ತಾಲ್ಲೂಕು ಮಟ್ಟದ ನಾಗರೀಕ ಹಕ್ಕು ಸಂರಕ್ಷಣಾ ಸಮಿತಿಯ ಕಾರ್ಯಾದಾನಿಯಾಗಿ ಕಾರ್ಯನಿರ್ವಹಿಸುವುದು.
17. ನೈಸರ್ಗಿಕ ಹಾವಳಿ ಮತ್ತು ಬೆಂಕಿ ಅನಾಹುತದಲ್ಲಿ ನೊಂದ ಸಂತ್ರಸ್ತರಿಗೆ ಧನ ಸಹಾಯ ಮಾಡುವಲ್ಲಿ ಪ್ರಯತ್ನಿಸುವುದು.
18. ಪ.ಜಾತಿ:ಪ.ವರ್ಗದ ಜನರ ಸಲುವಾಗಿ ಮನೆ, ಜಾಗೆ, ಸ್ಮಶಾನ ಜಾಗೆ, ಈಗಿನ ಕಾಲೋನಿಯನ್ನು ಹೆಚ್ಚಿಸುವ ಬಗ್ಗೆ ಹಾಗೂ ಪ್ರತ್ಯೇಕ ಕಾಲೋನಿ ನಿರ್ಮಾಣದ ಬಗ್ಗೆ ಸಮಾಜ ಕಲ್ಯಾಣ ಇಲಾಖೆಯ ಸಂಸ್ಥೆಗಳ ಕಟ್ಟಡದ ನಿರ್ಮಾಣ ಬಗ್ಗೆ, ಭೂಮಿ ಖರೀದಿ ಬಗ್ಗೆ ಪ್ರಕರಣಗಳನ್ನು ತಯಾರಿಸುವುದು, ಪ.ಜಾತಿ:ಪ.ವರ್ಗದ ಜನರಿಗೆ ಮನೆಗಳ ನಿರ್ಮಾಣ ಮಾಡಲು

ಮಂಜೂರಾದ ಭೂಮಿಯನ್ನು ಹಾಗೂ ಲೀಜ್ ಮೇಲೆ ಕೊಟ್ಟ ಭೂಮಿಯನ್ನು ವಶಪಡಿಸಿಕೊಳ್ಳುವ ಕ್ರಮ ಜರುಗಿಸುವುದು. ಸರ್ಕಾರಿ ಗ್ರಾಮಠಾಣಾ ಜಾಗೆಯನ್ನು ಅಭಿವೃದ್ಧಿಪಡಿಸಲು ಮತ್ತು ಮನೆ ಕಟ್ಟಲು ಕಂದಾಯ ಇಲಾಖೆಯಿಂದ ಪಡೆದು ಕೊಳ್ಳುವ ಕ್ರಮ ಜರುಗಿಸುವುದು.

**ಆರ್ಥಿಕಾಭಿವೃದ್ಧಿ:**

19. ಪ.ಜಾತಿ:ಪ.ವರ್ಗದ ಜನರ ಒಕ್ಕಲುತನ ಕಾಲೋನಿಗಳನ್ನು ನಿರ್ವಹಿಸುವುದು. ಹಾಗೂ ಜಾಯಿಂಟ್ ಫಾರ್ಮ್ ಕೈಗಾರಿಕೆ, ಕೂಲಿಕಾರ ಸಹಕಾರಿ ಸಂಘಗಳನ್ನು ಅವರ ಅನುಕೂಲಕ್ಕಾಗಿ ಮಾಡುವುದು.
20. ತಾಲ್ಲೂಕಿನಲ್ಲಿ ಪ.ಜಾತಿ:ಪ. ವರ್ಗದ ಸೋಷಿಯಲ್ ಹಾಗೂ ಎಕನಾಮಿಕ್ ಸರ್ವೆ ಮಾಡಿ ಫಲಾನುಭವಿಗಳನ್ನು ವಿಶೇಷ ಘಟಕ ಯೋಜನೆ, ಐ.ಆರ್.ಡಿ.ಪಿ. ಟಿ.ಎಸ್.ಪಿ. ಅಂತ್ಯೋದಯ, ಟ್ರಾಯಿಜಂ, ಯೋಜನೆಗಳ ಸಾಮಾಜಿಕ ಆರ್ಥಿಕ ಸಮೀಕ್ಷೆ ಕೈಕೊಳ್ಳುವುದು.
21. ಭೂ ರಹಿತ ಕಾರ್ಮಿಕರನ್ನು ಗುರುತಿಸುವುದು.
22. ಸ್ಥಳೀಯ ಸಂಸ್ಥೆಗಳು ಕಾಯ್ದಿರಿಸಿದ ಶೇ. 18 ಮತ್ತು 20ರ ಹಣದಲ್ಲಿ ಯೋಜನೆಗಳನ್ನು ಕಾರ್ಯಗತ ಮಾಡುವುದು.
23. ಅಂತರ್‌ಜಾತಿ ವಿವಾಹವಾದ ದಂಪತಿಗಳಿಗೆ ಸಹಾಯಧನ ಮಂಜೂರು ಕುರಿತು ಪ್ರಕರಣ ತಯಾರಿಸುವುದು.
24. ಪ.ಜಾತಿಯ ಜನರ ವಾಸದ ಮನೆಗಳಿಗೆ ಹಾಗೂ ಕಾಲೋನಿಗಳಿಗೆ ವಿದ್ಯುತ್ ಪೂರೈಕೆ ಕುರಿತು ಹಾಗೂ ಕುಡಿಯುವ ನೀರಿನ ಪೂರೈಕೆ ಕುರಿತು ಸಮೀಕ್ಷೆ ಮಾಡುವುದು.
25. ಪ.ಜಾತಿ:ಪ.ವರ್ಗದ ಜನರು ಯಾರು ವೃದ್ದಾಪ್ಯವೇತನ, ವಿಧವಾ ವೇತನ ಹೆರಿಗೆ ಭತ್ಯೆ, ಅಂಗವಿಕಲರ ಭತ್ಯೆ ಮತ್ತು ಕ್ರಾನಿಕ್ ರೋಗದಿಂದ ಬಳಲುವರೋ ಅಂತಹ ಫಲಾನುಭವಿಗಳನ್ನು ಗುರುತಿಸಿ ಸಂಬಂಧಿಸಿದ ಅಧಿಕಾರಿಗಳಿಗೆ ಭೇಟಿಯಾಗಿ ಮಂಜೂರಿಸುವುದು.
26. ಪ.ಜಾತಿ:ಪ.ವರ್ಗದ ಜನರು ತಮ್ಮ ಭೂಮಿಗಳನ್ನು ಮರಳಿ ಪಡೆಯುವಲ್ಲಿ ಸಹಾಯ ಮಾಡುವುದು ಹಾಗೂ ಭೂಮಿ ಮಂಜೂರಿಯಲ್ಲಿಯೂ ಸಹಾಯ ಮಾಡುವುದು.

**ಇತರೆ**

27. ಸರ್ಕಾರಿ ಇಲಾಖೆ ಅರೆ ಸರ್ಕಾರಿ ಇಲಾಖೆ, ಸ್ಥಳೀಯ ಸಂಸ್ಥೆ ಮತ್ತು ಔದ್ಯೋಗಿಕಗಳಲ್ಲಿ ಪ.ಜಾತಿ:ಪ.ವರ್ಗದ ಅಭ್ಯರ್ಥಿಗಳನ್ನು ಸರ್ಕಾರಿ ನಿಯಮಾವಳಿ ಪ್ರಕಾರ ನೇಮಕಾತಿ ಮಾಡಿದ ಬಗ್ಗೆ ಪರಿಶೀಲನೆ ಮಾಡಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳಿಗೆ ವರದಿ ಸಲ್ಲಿಸುವುದು.
28. ಇತರೆ ಇಲಾಖೆಯಿಂದ ಜಾತಿ ಪರಿಶೀಲನೆಗೆ ಬಂದ ಜಾತಿ ಪ್ರಮಾಣ ಪತ್ರಗಳ ಸಿಂಧುತ್ವವನ್ನು ಪರಿಶೀಲನೆ ಮಾಡುವುದು.
29. ಸರ್ಕಾರಿ ಸಂಘಗಳಲ್ಲಿ, ಯೂತ್ ಕ್ಲಬ್‌ಗಳಲ್ಲಿ, ಮಹಿಳಾ ಮಂಡಳಿಗಳಲ್ಲಿ, ಸ್ಥಳೀಯ ಅಭಿವೃದ್ಧಿಯ ಬ್ಯಾಂಕ್‌ಗಳಲ್ಲಿ ಪರಿಶಿಷ್ಟ ಜಾತಿ: ಪ.ವರ್ಗದ ಜನರು ಸದಸ್ಯತ್ವ ಹೊಂದಲು ಪ್ರೋತ್ಸಾಹಿಸುವುದು.
30. ಕಾರ್ಯನಿರ್ವಾಹಕ ಅಧಿಕಾರಿಗಳು, ತಾಲ್ಲೂಕು ಪಂಚಾಯತ್ : ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ಅಧಿಕಾರಿಗಳು ಹಾಗೂ ಆಯುಕ್ತರು ಸಮಾಜ ಕಲ್ಯಾಣ ಇಲಾಖೆರವರು ವಹಿಸುವ ಯಾವುದೇ ಕೆಲಸ ಕಾರ್ಯಗಳನ್ನು ನಿರ್ವಹಿಸುವುದು.

**3) ಕಛೇರಿ ಸಿಬ್ಬಂದಿಯವರ ಕರ್ತವ್ಯ ನಿರ್ವಹಣೆ ವಿವರಗಳು**

ಕಛೇರಿ ಸಿಬ್ಬಂದಿ ವರ್ಗದವರು ಸಂಬಂಧಿಸಿದ ಅಧಿಕಾರಿಗಳ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಆಯಾಯ ಅಧಿಕಾರಿಗಳಿಗೆ ಪೂರಕವಾಗಿ ಸಹಾಯವಾಗುವಂತೆ ಕಾರ್ಯನಿರ್ವಹಿಸುವುದು. ಸಾರ್ವಜನಿಕರಿಂದ, ಮೇಲಾಧಿಕಾರಿಗಳ ಕಛೇರಿಯಿಂದ ಹಾಗೂ ಅಧೀನ ಅಧಿಕಾರಿಗಳಿಂದ ಬರುವಂತಹ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ, ಸಂಬಂಧಿಸಿದ ಅಧಿಕಾರಿಗಳ ಹಾಗೂ ಕಛೇರಿ ಅಧೀಕ್ಷಕರ ಕಿರು ಸಹಿ ಮಾಡಿಸಿದ ನಂತರ, ಸದರಿ ಪತ್ರಗಳನ್ನು ನೋಂದಾಯಿಸಿ, ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ಸ್ವೀಕೃತಿ ಪಡೆದು ನೀಡಲಾಗುವುದು.

ತುರ್ತು ಟಪಾಲುಗಳ ಬಗ್ಗೆ ಆದ್ಯತೆ ಮೇರೆಗೆ ವಿಷಯ ನಿರ್ವಾಹಕರ ಕಛೇರಿ ಕೈಪಿಡಿಯ ಪ್ರಕಾರ, ಕಡತವನ್ನು ಪ್ರಾರಂಭಿಸಿ, ಅಧಿಕಾರಿಗಳ ಅನುಮೋದನೆಗಾಗಿ ಅಥವಾ ಮಂಜೂರಾತಿಗಾಗಿ ಕ್ರಮ ಕೈಗೊಳ್ಳುವರು.

**4) ಇಲಾಖೆಯು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ರೂಪಿಸಿರುವ ಗುಣಮಟ್ಟಗಳು:-**

1) ಕಛೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ನೊಂದಾಯಿಸಿ, ಆ ದಿನವೇ ವಿಷಯ ನಿರ್ವಾಹಕರಿಗೆ ನೀಡುವಂತಹ ವ್ಯವಸ್ಥೆ ಹಾಗೂ ನಿಗದಿತ ಅವಧಿಯೊಳಗೆ ಇತ್ಯರ್ಥಪಡಿಸುವುದು.
2) ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆ ಮಾಡಲು ಮಾಸಿಕ ಸಭೆಗಳನ್ನು ಏರ್ಪಡಿಸುವುದು.
3) ಆಗಿಂದಾಗ್ಗೆ ಅಧಿಕಾರಿಗಳಿಂದ ಹಾಗೂ ಕಛೇರಿ ಅಧೀಕ್ಷಕರಿಂದ ವಿಷಯ ನಿರ್ವಾಹಕರ ಮೇಲೆ ರುಜು ತಪಾಸಣೆ ಕಾರ್ಯ.
4) ಇಲಾಖಾ ಸಂಸ್ಥೆಗಳ ಸಿಬ್ಬಂದಿ ವರ್ಗದವರಿಗೆ ಕಾರ್ಯಾಗಾರ ನಡೆಸುವುದು.
5) ಸರ್ಕಾರವು / ಮೇಲಾಧಿಕಾರಿಗಳು ನೀಡುವ ಆದೇಶಗಳನ್ನು ಹಾಗೂ ಸುತ್ತೋಲೆಗಳನ್ನು ತ್ವರಿತಗತಿಯಲ್ಲಿ ಪಾಲಿಸುವುದು.
6) ಸಾರ್ವಜನಿಕ ಕುಂದುಕೊರತೆಗಳ ನಿವಾರಣೆಯ ಬಗ್ಗೆ ಸಾರ್ವಜನಿಕರಿಗೆ ಸೂಕ್ತ ಮಾಹಿತಿ ನೀಡುವುದು.

**5) ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರಿಕರಿಗೆ ದೊರೆಯಬಹುದಾದ ಅನುಕೂಲತೆಯ ವಿವರಗಳು**

1) ಇಲಾಖೆಯ ಕಾರ್ಯಕ್ರಮ ಹಾಗೂ ಯೋಜನೆಗಳಿಗೆ ಸಂಬಂಧಿಸಿದ ಮಾಹಿತಿಗಳು, ಆದೇಶಗಳು ವಾರ್ಷಿಕ ಸಂಕಲನ, ಕ್ರಿಯಾಯೋಜನೆ ಹಾಗೂ ಕಿರುಹೊತ್ತಿಗೆಗಳನ್ನು ಸಾರ್ವಜನಿಕರ ಪ್ರಕಟಣೆಗಾಗಿ ನೀಡುವುದು.

2) ಸಾರ್ವಜನಿಕ ಕುಂದುಕೊರತೆಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕ ಸಂಪರ್ಕಾಧಿಕಾರಿಗಳನ್ನು ನೇಮಿಸುವುದು.

3) ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ರೀತ್ಯಾ ರಾಜ್ಯ ಮಟ್ಟದಲ್ಲಿ, ಜಂಟಿ ನಿರ್ದೇಶಕರು (ವಿ.ಘ.ಯೋ) ಯವರನ್ನು ಸಕ್ಷಮ ಪ್ರಾಧಿಕಾರವಾಗಿ ಹಾಗೂ ಸಮಾಜಕಲ್ಯಾಣ ಆಯುಕ್ತರವರನ್ನು ಮೇಲ್ಮನವಿ ಪ್ರಾಧಿಕಾರವನ್ನಾಗಿ, ಹಾಗೂ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳನ್ನು ಸಕ್ಷಮ ಪ್ರಾಧಿಕಾರವನ್ನಾಗಿ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್‌ರವರನ್ನು ಮೆಲ್ಮನವಿ ಪ್ರಾಧಿಕಾರವನ್ನಾಗಿಯೂ, ಅದೇ ರೀತಿ ತಾಲ್ಲೂಕು ಮಟ್ಟದಲ್ಲಿ ಕಛೇರಿ ಅಧೀಕ್ಷಕರನ್ನು ಸಕ್ಷಮ ಪ್ರಾಧಿಕಾರಿಯಾಗಿ ಹಾಗೂ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ನೇಮಿಸಲಾಗಿದೆ.

4) ಇಲಾಖೆಯಲ್ಲಿ ಮಂಜೂರಾತಿಗಾಗಿ ನೀಡಲಾಗಿರುವ ಕಾಲಾವಧಿ ನಿಗದಿ ವಿಚಾರಗಳನ್ನು ಸಾರ್ವಜನಿಕರಿಗೆ ತಿಳಿಸುವಂಥ ಕಾರ್ಯಪಟ್ಟಿ ಮಾಡಿ ಪ್ರಕಟಿಸಿದೆ.

ಪಿ.ಆರ್. 861 ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು, ಸಿರುಗುಪ್ಪ

## ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ ಸಂಡೂರು

## ಅಧಿಸೂಚನೆ ಸಂಖ್ಯೆ: ಜಿಸಕಅ:ವಿಘಯೋ:ಸಿಆರ್:2004-05, ದಿನಾಂಕ: 21ನೇ ಮೇ 2004

**ವಿಷಯ:** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ಹಾಗೂ 2002ರ ಅನುಷ್ಠಾನದ ಬಗ್ಗೆ.

**ಉಲ್ಲೇಖ:** ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಆಸುಇ:56:ಯೋಮಸ:02:(1)ದಿನಾಂಕ:18.7.2002.

ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2000 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2002 ಈಗಾಗಲೇ ಜಾರಿಗೆ ಬಂದಿದ್ದು, ಸದರಿ ಅಧಿನಿಯಮದ ರೀತ್ಯಾ ಎಲ್ಲಾ ಸಾರ್ವಜನಿಕ ಪ್ರಾಧಿಕಾರಿಗಳು (ಕಛೇರಿಗಳು) ಅಧಿನಿಯಮದ ಸೆಕ್ಷನ್ 2(ಎ) ಅಡಿಯಲ್ಲಿ ವ್ಯಾಖ್ಯಾನಿಸಿರುವಂತೆ, ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಗಳನ್ನು ನೇಮಿಸಬೇಕಾಗಿರುತ್ತದೆ. ಅದರಂತೆ ತಾಲ್ಲೂಕು ಮಟ್ಟದ ಹಂತದಲ್ಲಿ ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳಾಗಿ ಈ ಕೆಳಗಿನಂತೆ ನೇಮಿಸಲಾಗಿದೆ.

| | **ಸಕ್ಷಮ ಪ್ರಾಧಿಕಾರ** | **ಆಪೀಲು ಪ್ರಾಧಿಕಾರ** |
|---|---|---|
| ತಾಲ್ಲೂಕು ಮಟ್ಟದಲ್ಲಿ | ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿ | ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ |

ಸರ್ಕಾರದ ಅಧಿನಿಯಮದ ಸೆಕ್ಷನ್ 3(ಬಿ) ಅಡಿಯಲ್ಲಿ ನಿಗದಿಪಡಿಸಿದಂತೆ, ಈ ಕೆಳಗೆ ತಿಳಿಸಿರುವ ವಿವರಗಳನ್ನು ಸಾರ್ವಜನಿಕ ಪ್ರಕಟಣೆಗಾಗಿ ಈ ಕೆಳಗಿನಂತೆ ತಿಳಿಯಪಡಿಸಿದೆ.

**1) ಇಲಾಖೆಯ ಸಂಘಟನೆ, ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರ.**

ತಾಲ್ಲೂಕು ಹಂತದಲ್ಲಿ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯು ತಾಲ್ಲೂಕು ಪಂಚಾಯತ್ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು ಕಛೇರಿಯ ಮುಖ್ಯಸ್ಥರಾಗಿರುತ್ತಾರೆ. ಈ ಕೆಳಗಿನಂತೆ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

**ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಸಂಡೂರು ಸಿಬ್ಬಂದಿ ವಿವರ.**

1. ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿ - 1 ಹುದ್ದೆ
2. ಕಛೇರಿ ಅಧೀಕ್ಷಕರು - 1 ಹುದ್ದೆ
3. ಪ್ರಥಮ ದರ್ಜೆ ಸಹಾಯಕರು - 1 ಹುದ್ದೆ
4. ದ್ವಿತೀಯ ದರ್ಜೆ ಸಹಾಯಕರು - 1 ಹುದ್ದೆ
5. ಬೆರಳಚ್ಚುಗಾರರು - 1 ಹುದ್ದೆ
6. ಜವಾನ - 1 ಹುದ್ದೆ (ದಿನಗೂಲಿಯಲ್ಲಿ ಸೇವೆ)

6 ಹುದ್ದೆ

1. ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಸಂಡೂರು ಸಂಖ್ಯೆ : 120

1. ಮೇಲ್ವಿಚಾರಕರು - 1 ಹುದ್ದೆ
2. ಅಡಿಗೆಯವರು - 3 ಹುದ್ದೆ (1ಹುದ್ದೆ ಖಾಲಿ)
3. ಅಡಿಗೆ ಸಹಾಯಕರು - 2 ಹುದ್ದೆ

6 ಹುದ್ದೆ

2. ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಬಂಡ್ರಿ ಸಂಖ್ಯೆ : 80

1. ಮೇಲ್ವಿಚಾರಕರು - 1 ಹುದ್ದೆ
2. ಅಡಿಗೆಯವರು - 2 ಹುದ್ದೆ (1ಹುದ್ದೆ ಖಾಲಿ)
3. ಅಡಿಗೆ ಸಹಾಯಕ - 1 ಹುದ್ದೆ

4 ಹುದ್ದೆ

3. ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ತೋರಣಗಲ್ಲು ಸಂಖ್ಯೆ : 75

| | | | |
|---|---|---|---|
| 1. | ಮೇಲ್ವಿಚಾರಕರು | - | 1 ಹುದ್ದೆ |
| 2. | ಅಡಿಗೆಯವರು | - | 2 ಹುದ್ದೆ (1ಹುದ್ದೆ ಖಾಲಿ) |
| 3. | ಅಡಿಗೆ ಸಹಾಯಕ | - | 1 ಹುದ್ದೆ |
| | | | 4 ಹುದ್ದೆ |

4. ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಸೋಮೇನಹಳ್ಳಿ ಸಂಖ್ಯೆ : 75

| | | | |
|---|---|---|---|
| 1. | ಮೇಲ್ವಿಚಾರಕರು | - | 1 ಹುದ್ದೆ |
| 2. | ಅಡಿಗೆಯವರು | - | 2 ಹುದ್ದೆ (1ಹುದ್ದೆ ಖಾಲಿ) |
| 3. | ಅಡಿಗೆ ಸಹಾಯಕ | - | 1 ಹುದ್ದೆ |
| | | | 4 ಹುದ್ದೆ |

5. ಸರ್ಕಾರಿ ಪ:ಪಂಗಡ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಸಂಡೂರು ಸಂಖ್ಯೆ : 50

| | | | |
|---|---|---|---|
| 1. | ಮೇಲ್ವಿಚಾರಕರು | - | 1 ಹುದ್ದೆ |
| 2. | ಅಡಿಗೆಯವರು | - | 2 ಹುದ್ದೆ (2ಹುದ್ದೆ ಖಾಲಿ) |
| 3. | ಅಡಿಗೆ ಸಹಾಯಕ | - | 1 ಹುದ್ದೆ (1 ಹುದ್ದೆ ಖಾಲಿ) |
| | | | 4 ಹುದ್ದೆ |

6. ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿನಿಲಯ ಸಂಡೂರು ಸಂಖ್ಯೆ : 85

| | | | |
|---|---|---|---|
| 1. | ಮೇಲ್ವಿಚಾರಕರು | - | 1 ಹುದ್ದೆ (ನಿವೃತ್ತಿಯಿಂದ ಖಾಲಿ) |
| 2. | ಅಡಿಗೆಯವರು | - | 2 ಹುದ್ದೆ |
| 3. | ಅಡಿಗೆ ಸಹಾಯಕ | - | 1 ಹುದ್ದೆ (ನಿಧನರಾದ ಪ್ರಯುಕ್ತ ಖಾಲಿ) |
| 4. | ರಾತ್ರಿ ಕಾವಲುಗಾರ | - | 1 ಹುದ್ದೆ (ದಿನಗೂಲಿಯಲ್ಲಿ ಸೇವೆ) |
| | | | 5 ಹುದ್ದೆ |

7. ಪ:ಪಂಗಡದ ಸರ್ಕಾರಿ ಆಶ್ರಮ ಶಾಲೆ : ಯಶವಂತಪುರ 75

| | | | |
|---|---|---|---|
| 1. | ಶಿಕ್ಷಕರು | - | 3 ಹುದ್ದೆ (3 ಹುದ್ದೆ ಖಾಲಿ) |
| 2. | ಅಡಿಗೆಯವರು | - | 2 ಹುದ್ದೆ (2 ಹುದ್ದೆ ಖಾಲಿ) |
| 3. | ಅಡಿಗೆ ಸಹಾಯಕರು | - | 2 ಹುದ್ದೆ (1 ಹುದ್ದೆ ಖಾಲಿ) |
| | | | 7 ಹುದ್ದೆ |

8. ಸರ್ಕಾರಿ ಮೆಟ್ರಿಕ್ ನಂತರ ವಿದ್ಯಾರ್ಥಿನಿಲಯ ಸಂಡೂರು ಸಂಖ್ಯೆ : 50

| | | | |
|---|---|---|---|
| 1. | ಮೇಲ್ವಿಚಾರಕರು | - | 1 ಹುದ್ದೆ |
| 2. | ಅಡಿಗೆಯವರು | - | 2 ಹುದ್ದೆ |
| 3. | ಅಡಿಗೆ ಸಹಾಯಕರು | - | 1 ಹುದ್ದೆ |
| | | | 4 ಹುದ್ದೆ |

**ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ತಾಲ್ಲೂಕು ಮಟ್ಟದಲ್ಲಿ ಪರಿಶಿಷ್ಟ ಜಾತಿ ಮತ್ತು ವರ್ಗಗಳ ಸರ್ವತೋಮುಖ ಅಭಿವೃದ್ಧಿಗಾಗಿ ಈ ಕೆಳಕಂಡ ಹಲವಾರು ಶೈಕ್ಷಣಿಕ ಮತ್ತು ಆರ್ಥಿಕ ನೆರವಿನ ಯೋಜನೆಗಳನ್ನು ಅನುಷ್ಠಾನ ಗೊಳಿಸಲಾಗುತ್ತಿದೆ.**

1) ವಸತಿ ಶಾಲೆಗಳ ನಿರ್ವಹಣೆ.
2) ಅನುದಾನಿತ ವಿದ್ಯಾರ್ಥಿ ನಿಲಯಗಳ ತಪಾಸಣೆ.
3) ಕಾಲೇಜು ವಿದ್ಯಾರ್ಥಿ ನಿಲಯಗಳ ನಿರ್ವಹಣೆ.
4) ಭಾರತದ ಸರ್ಕಾರದ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ ನೀಡುವಿಕೆ.
5) ಪುಸ್ತಕ ಭಂಡಾರ.
6) ಅಧ್ಯಯನ ಪ್ರವಾಸಕ್ಕೆ ನೆರವು.
7) 1 ರಿಂದ 4ನೇ ತರಗತಿವರೆಗೆ ವಿದ್ಯಾರ್ಥಿವೇತನ ವಿತರಣೆ.
8) ಪರಿಶಿಷ್ಟ ಜಾತಿ: ವರ್ಗಗಳ ಜನರಿಗಾಗಿ ವಿದ್ಯಾರ್ಥಿ ನಿಲಯಗಳ ನಿರ್ವಹಣೆ.
10) ಕಾಲೇಜು ವಿದ್ಯಾರ್ಥಿವೇತನ ಸರ್ಕಾರಿ ವಸತಿ ನಿಲಯಗಳ ಪ್ರಾರಂಭ.
11) ಕಾಲೇಜು ವಿದ್ಯಾರ್ಥಿಗಳಿಗೆ ಪುರಸ್ಕಾರ ಹಣದ ನೀಡಿಕೆ.
12) ಎಸ್‌ಎಸ್‌ಎಲ್‌ಸಿಯಲ್ಲಿ ಪ್ರಥಮ ದರ್ಜೆಯಲ್ಲಿ ಪಾಸಾದ ವಿದ್ಯಾರ್ಥಿಗಳಿಗೆ ನಗದು ಬಹುಮಾನ ನೀಡಿಕೆ.
13) ಸ್ವಯಂ ಉದ್ಯೋಗಕ್ಕೆ ಶಿಷ್ಯವೇತನ.
14) ಅಂತರ್ಜಾತಿ ವಿವಾಹವಾದ ದಂಪತಿಗಳಿಗೆ ಸಹಾಯಧನ ಒದಗಿಸುವುದು.

15) ಜಾತಿ ಪರಿಶೀಲನೆ ನಡೆಸಿ ಸಿಂಧುತ್ವ ಪ್ರಮಾಣ ಪತ್ರ ನೀಡಿಕೆಯಲ್ಲಿ ವರದಿ ಸಲ್ಲಿಸುವುದು.
16) ವಿಶೇಷ ಘಟಕ ಯೋಜನೆಗೆ ವಿಶೇಷ ಕೇಂದ್ರೀಯ ನೆರವು.
17) ಅಂಬೇಡ್ಕರ್ ವಸತಿ ಯೋಜನೆ
18) ಆಶ್ರಯ ವಸತಿ ಯೋಜನೆ
19) ಪರಿಶಿಷ್ಟ ಜಾತಿ:ಪರಿಶಿಷ್ಟ ವರ್ಗದ ದೌರ್ಜನ್ಯಕ್ಕೆ ಒಳಪಟ್ಟಲ್ಲಿ ಪರಿಹಾರ ಮಂಜೂರಾತಿ.
20) ಅಸ್ಪೃಶ್ಯತಾ ನಿವಾರಣೆ.
21) 5 ರಿಂದ 10ನೇ ತರಗತಿ ವರೆಗಿನ ಪರಿಶಿಷ್ಟ ಜಾತಿ: ವರ್ಗಗಳ ವಿದ್ಯಾರ್ಥಿವೇತನ ಮಂಜೂರು.

**ಅಧಿಕಾರಿಗಳ ಕರ್ತವ್ಯಗಳು**

1. ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಮತ್ತು ಕಾರ್ಯನಿರ್ವಾಹಕ ಅಧಿಕಾರಿಗಳು ತಾಲ್ಲೂಕು ಪಂಚಾಯಿತಿ ಅಧೀನದಲ್ಲಿ ಕಾರ್ಯನಿರ್ವಹಿಸುವುದು (ಇಲಾಖೆಗೆ ಸಂಬಂಧಿಸಿದ ಕಾರ್ಯಗಳನ್ನು ನಿರ್ವಹಿಸುವುದು).
2. ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗ ಜನಾಂಗದವರ ಏಳಿಗೆಗಾಗಿ ವಿವಿಧ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ವಿವರವಾದ ಯೋಜನೆಗಳನ್ನು ತಯಾರಿಸಲು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳೊಂದಿಗೆ ಸಹಕರಿಸಿ ವರದಿ ಸಲ್ಲಿಸುವುದು.
3. ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು ತಿಂಗಳಲ್ಲಿ 15 ದಿವಸಗಳನ್ನು ವಸತಿ ನಿಲಯಗಳ ತಪಾಸಣೆ ನಡೆಸುವುದು ಮತ್ತು ನ್ಯೂನತೆಗಳು ಇದ್ದಲ್ಲಿ ಸರಿಪಡಿಸಿ ನಿಲಯದ ವಿದ್ಯಾರ್ಥಿಗಳ ಕುಂದು ಕೊರತೆಗಳನ್ನು ನಿವಾರಿಸುವುದು.
4. ಪರಿಶಿಷ್ಟ ಜಾತಿ:ವರ್ಗಗಳ ಮೇಲೆ ದೌರ್ಜನ್ಯಕ್ಕೆ ಒಳಗಾದವರ ಪ್ರದೇಶಕ್ಕೆ ತೆರಳಿ ಸ್ಥಳ ಪರಿಶೀಲನೆ ವಿವರವಾದ ವರದಿಯನ್ನು ಮೇಲಾಧಿಕಾರಿಗಳಿಗೆ ಸಲ್ಲಿಸುವುದು.

**ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಯವರ ಇತರೆ ಕೆಲಸಗಳು**

1. ಸರ್ಕಾರದಿಂದ ಹಾಗೂ ಮೇಲಾಧಿಕಾರಿಗಳಿಂದ ಬರುವ ಪತ್ರಗಳಿಗೆ ಒಂದು ವಾರದಲ್ಲಿ ಉತ್ತರವನ್ನು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಮುಖಾಂತರ ಸಲ್ಲಿಸುವುದು.
2. ವಿದ್ಯಾರ್ಥಿ ನಿಲಯ ಮೇಲ್ವಿಚಾರಕರ ಮತ್ತು ಸಿಬ್ಬಂದಿಯ ಕೆಲಸದ ಮೇಲ್ವಿಚಾರಣೆ ಮಾಡುವುದು. ಮತ್ತು ಮಾಹಿತಿಯನ್ನು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳಿಗೆ ಒದಗಿಸುವುದು.
3. ತಾಲ್ಲೂಕು ಮಟ್ಟದಲ್ಲಿ ವಿದ್ಯಾರ್ಥಿ ನಿಲಯಗಳಲ್ಲಿ ಖಾಲಿ ಇರುವ ನಿಲಯಾರ್ಥಿಗಳ ಸ್ಥಳಗಳಿಗೆ ಭರ್ತಿಮಾಡಲು ಪತ್ರಿಕಾ ಪ್ರಕಟಣೆ ಮಾಡಿ ಬಂದಂತಹ ಅರ್ಜಿಗಳನ್ನು ಪರಿಶೀಲಿಸಿ ಅರ್ಹ ವಿದ್ಯಾರ್ಥಿಗಳಿಗೆ ಪ್ರವೇಶ ತೆಗೆದುಕೊಳ್ಳಲು ತಾಲ್ಲೂಕು ಪಂಚಾಯತ್ ಮುಖಾಂತರ ಆಯ್ಕೆ ಪ್ರಕ್ರಿಯೆ ನಡೆಸಲಾಗುವುದು.
4. ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗಗಳ ಅಭಿವೃದ್ಧಿ ಕಾರ್ಯಕ್ರಮಗಳು ತ್ವರಿತವಾಗಿ ಅನುಷ್ಠಾನಗೊಳಿಸಲು ತಾಲ್ಲೂಕು ಪಂಚಾಯತ್ ಪುರಸಭೆ ಪಟ್ಟಣ ಪಂಚಾಯತ್ ಇನ್ನಿತರೆ ಇಲಾಖೆಗಳಿಗೆ ಭೇಟಿ ನೀಡುವುದು. ಹಾಗೂ ಅನುಷ್ಠಾನಗೊಳಿಸಿದ ಬಗ್ಗೆ ಮಾಹಿತಿಯನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳಿಗೆ ಸಲ್ಲಿಸುವುದು.
5. ತಾಲ್ಲೂಕು ಮಟ್ಟದಲ್ಲಿ ಬಿಡುಗಡೆಯಾದ ಅನುದಾನವನ್ನು ಪೂರ್ತಿಯಾಗಿ ಖರ್ಚು ಮಾಡಿ ಪ್ರಗತಿ ವರದಿಯನ್ನು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು ರವರಿಗೆ ಸಲ್ಲಿಸುವುದು.
6. ಪರಿಶಿಷ್ಟ ಜಾತಿ ವರ್ಗದವರ ಏಳಿಗೆಗಾಗಿ ಸಂಬಂಧಿಸಿದ ಸಹಕಾರ ಸಂಘಗಳಿಗೆ ಭೇಟಿ ನೀಡಿ ಅವುಗಳ ಕಾರ್ಯ ವಿಧಾನವನ್ನು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು ರವರಿಗೆ ವರದಿ ನೀಡುವುದು.
7. ಪರಿಶಿಷ್ಟ ಜಾತಿ ವರ್ಗದ ವಿದ್ಯಾರ್ಥಿಗಳಿಗೆ ಶಿಕ್ಷಣ ಕ್ಷೇತ್ರದಲ್ಲಿ ಎಲ್ಲ ಸೌಲಭ್ಯಗಳನ್ನು ಹಾಗೂ ವಿದ್ಯಾರ್ಥಿ ನಿಲಯಗಳಲ್ಲಿನ ಮೂಲ ಭೂತ ಸೌಕರ್ಯಗಳನ್ನು ಬೇಡಿಕೆ ಪತ್ರಕ್ಕೆ ತಕ್ಕಂತೆ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳಿಗೆ ವರದಿ ನೀಡುವುದು.
8. ಎಲ್ಲಾ ಅಭಿವೃದ್ಧಿ ಇಲಾಖೆಯ ಮುಖ್ಯಸ್ಥರಿಂದ ಶೇ 18 ನಿಧಿಯಿಂದ ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗದವರಿಗೆ ವಿವಿಧ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಎಲ್ಲಾ ಇಲಾಖೆಗೆ ಭೇಟಿ ನೀಡುವುದು.
9. ಅನುದಾನಿತ ಸಂಸ್ಥೆಗಳಿಗೆ ಅನುದಾನ ಒದಗಿಸಲು ತಪಾಸಣೆ ನಡೆಸಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು ರವರಿಗೆ ವರದಿ ಸಲ್ಲಿಸುವುದು.
10. ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ನಿರ್ದೇಶನದಂತೆ, ಇಲಾಖೆಯ ಇನ್ನಿತರೆ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಕ್ರಮ ಕೈಗೊಳ್ಳುವುದು.

**ಕಛೇರಿ ಸಿಬ್ಬಂದಿಯವರ ಕರ್ತವ್ಯ ನಿರ್ವಹಣೆ ವಿವರಗಳು:**

ತಾಲ್ಲೂಕು ಮಟ್ಟದಲ್ಲಿ ಸಿಬ್ಬಂದಿ ವರ್ಗದವರು ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಅಧಿಕಾರಿಗಳಿಗೆ ಪೂರಕವಾಗಿ ಸಹಾಯಕವಾಗುವಂತೆ ಕಾರ್ಯನಿರ್ವಹಿಸುವರು, ಸಾರ್ವಜನಿಕರಿಂದ ಮೇಲಾಧಿಕಾರಿಗಳಿಂದ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ ಅಧಿಕಾರಿಗಳ ಕಿರು ರುಜು ಹಾಕಿಸಿ ಸಂಬಂಧಿಸಿದ ವಿಷಯ ನಿರ್ವಾಹಕರಿಗೆ ಕಳುಹಿಸುವುದು.

ತುರ್ತು ಟಪಾಲುಗಳಿಗೆ ಆದ್ಯತೆ ಮೇರೆಗೆ ವಿಷಯ ನಿರ್ವಾಹಕರು ಕಛೇರಿ ಕೈ ಪಿಡಿಯ ಪ್ರಕಾರ ಕಡತವನ್ನು ಪ್ರಾರಂಭಿಸಿ ಅಧಿಕಾರಿಗಳ ಅನುಮೋದನೆ ಪಡೆದು ಕಾರ್ಯನಿರ್ವಹಿಸುವುದು.

ಇಲಾಖಾ ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆ ಬಗ್ಗೆ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಮಾಸಿಕ ಸಭೆಯಲ್ಲಿ ಭಾಗವಹಿಸುವುದು.

ಸರ್ಕಾರವು:ಮೇಲಾಧಿಕಾರಿಗಳು ನೀಡುವ ಆದೇಶಗಳನ್ನು ಹಾಗೂ ಸುತ್ತೋಲೆಗಳನ್ನು ತ್ವರಿತಗತಿಯಲ್ಲಿ ಪಾಲಿಸುವುದು.

ಪಿ.ಆರ್. 862 ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿ, ಸಂಡೂರು.

## ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಚಿಕ್ಕೋಡಿ

**ಅಧಿಸೂಚನೆ ಸಂಖ್ಯೆ: ತಾಸಕಅ:ಕಅ:ಹಕ್ಕುಅ:ಸಿಆರ್-2003-04 "ಡಿ", ದಿನಾಂಕ: 29ನೇ ನವೆಂಬರ್ 2003**

**ವಿಷಯ:** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ಹಾಗೂ 2002ರ ಅನುಷ್ಠಾನದ ಬಗ್ಗೆ.

**ಉಲ್ಲೇಖ:** ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಆಸುಇ:56:ಯೋಮಸ:02:(1)ದಿನಾಂಕ:18.7.2002.

ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2002 ಈಗಾಗಲೇ ಜಾರಿಗೆ ಬಂದಿದ್ದು, ಸದರಿ ಅಧಿನಿಯಮ ರೀತ್ಯಾ ಎಲ್ಲಾ ಸಾರ್ವಜನಿಕ ಪ್ರಾಧಿಕಾರಿಗಳು (ಕಛೇರಿಗಳು) ಅಧಿನಿಯಮದ ಸೆಕ್ಷನ್ 2(ಎ) ಅಡಿಯಲ್ಲಿ ವ್ಯಾಖ್ಯಾನಿಸಿರುವಂತೆ, ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಗಳನ್ನು ನೇಮಿಸಬೇಕಾಗಿರುತ್ತದೆ. ಅದರಂತೆ ಪ್ರಾಧಿಕಾರಿಗಳಾಗಿ ಈ ಕೆಳಗಿನಂತೆ ನೇಮಿಸಲಾಗಿದೆ.

| | ಸಕ್ಷಮ ಪ್ರಾಧಿಕಾರಿ | ಅಪೀಲು ಪ್ರಾಧಿಕಾರ |
|---|---|---|
| ತಾಲ್ಲೂಕು ಮಟ್ಟದಲ್ಲಿ | ಕಛೇರಿ ಅಧೀಕ್ಷಕರು | ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು |

ಸರ್ಕಾರದ ಅಧಿನಿಯಮದ ಸೆಕ್ಷನ್ 3(ಬಿ) ಅಡಿಯಲ್ಲಿ ನಿಗದಿಪಡಿಸಿದಂತೆ, ಈ ಕೆಳಗೆ ತಿಳಿಸಿರುವ 4 ಶೀರ್ಷಿಕೆಗಳಲ್ಲಿ ತಿಳಿಸಿರುವ ವಿವರಗಳನ್ನು ಸಾರ್ವಜನಿಕ ಪ್ರಕಟಣೆಗಾಗಿ ಈ ಕೆಳಗಿನಂತೆ ತಿಳಿಯಪಡಿಸಿದೆ.

**1) ಇಲಾಖೆಯ ಸಂಘಟನೆ, ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು**

ತಾಲ್ಲೂಕು ಹಂತದಲ್ಲಿ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯ ತಾಲ್ಲೂಕು ಪಂಚಾಯತಿಯ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು,. ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು ಕಛೇರಿಯ ಮುಖ್ಯಸ್ಥರಾಗಿರುತ್ತಾರೆ. ಇವರಿಗೆ ಸಹಕರಿಸಲು ಸದರಿ ಕಛೇರಿಯಲ್ಲಿ ಈ ಕೆಳಗಿನಂತೆ ಪೂರಕ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

1. ಕಛೇರಿ ಅಧೀಕ್ಷಕರು - 1 ಹುದ್ದೆ
2. ಪ್ರಥಮ ದರ್ಜೆ ಸಹಾಯಕರು - 1 ಹುದ್ದೆ
3. ದ್ವಿತೀಯ ದರ್ಜೆ ಸಹಾಯಕರು - 1 ಹುದ್ದೆ
4. ಬೆರಳಚ್ಚುಗಾರರು - 1 ಹುದ್ದೆ
5. ಗ್ರೂಪ್ 'ಡಿ' ನೌಕರರು - 1 ಹುದ್ದೆ

ಇಲ್ಲಿ ನಮ್ಮ ಅಧೀನದಡಿಯಲ್ಲಿ ಬರುವ ಎಲ್ಲಾ ಸಂಸ್ಥೆಗಳ ಹೆಸರು ಮತ್ತು ವಿವರಗಳು ಈ ಕೆಳಗಿನಂತೆ ಇರುತ್ತದೆ.

| ಕ್ರ. ಸಂ. | ಸಂಸ್ಥೆಗಳ ಹೆಸರು | ಗ್ರಾಮ | ಮಂಜೂರಿ ಸಂಖ್ಯೆ |
|---|---|---|---|
| 1. | ಸರಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿನಿಲಯ, ಚಿಕ್ಕೋಡಿ | ಚಿಕ್ಕೋಡಿ | 100 |
| 2. | ಸರಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿನಿಲಯ, ಕಬ್ಬೂರ | ಕಬ್ಬೂರ | 50 |
| 3. | ಸರಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿನಿಲಯ, ಚಂದೂರ | ಚಂದೂರ | 50 |
| 4. | ಸರಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿನಿಲಯ, ಸದಲಗಾ | ಸದಲಗಾ | 50 |
| 5. | ಸರಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿನಿಲಯ, ಬೇಡಕಿಹಾಳ | ಬೇಡಕಿಹಾಳ | 50 |
| 6. | ಸರಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿನಿಲಯ, ನೇಜ | ನೇಜ | 50 |
| 7. | ಸರಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿನಿಲಯ, ಚಿಂಚಣಿ | ಚಿಂಚಣಿ | 50 |
| 8. | ಸರಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿನಿಲಯ, ನಿಪ್ಪಾಣಿ | ನಿಪ್ಪಾಣಿ | 50 |
| 9. | ಸರಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿನಿಲಯ, ಹುನ್ನರಗಿ | ಹುನ್ನರಗಿ | 50 |
| 10. | ಸರಕಾರಿ ಮೆಟ್ರಿಕ್ ಪೂರ್ವ ಬಾಲಕಿಯರ ವಸತಿ ನಿಲಯ, ಚಿಕ್ಕೋಡಿ | ಚಿಕ್ಕೋಡಿ | 50 |
| 11. | ಸರಕಾರಿ ಮೆಟ್ರಿಕ್ ಪೂರ್ವ ಬಾಲಕಿಯರ ವಸತಿ ನಿಲಯ, ಸದಲಗಾ | ಸದಲಗಾ | 25 |
| 12. | ಸರಕಾರಿ ಮೆಟ್ರಿಕ್ ಪೂರ್ವ ಬಾಲಕಿಯರ ವಸತಿ ನಿಲಯ, ಶಿರಡವಾಡ | ಶಿರಡವಾಡ | 50 |
| 13. | ಮೆಟ್ರಿಕ್ ನಂತರ ಬಾಲಕರ ವಸತಿನಿಲಯ, ಚಿಕ್ಕೋಡಿ | ಚಿಕ್ಕೋಡಿ | 50 |
| 14. | ಮೆಟ್ರಿಕ್ ನಂತರ ಬಾಲಕರ ವಸತಿನಿಲಯ, ಬೇಡಕಿಹಾಳ | ಬೇಡಕಿಹಾಳ | 50 |
| 15. | ಮೆಟ್ರಿಕ್ ನಂತರ ಬಾಲಕಿಯರ ವಸತಿನಿಲಯ, ಚಿಕ್ಕೋಡಿ | ಚಿಕ್ಕೋಡಿ | 50 |
| 16. | ಸರ್ಕಾರಿ ಆಶ್ರಮ ಶಾಲೆ, ಚಿಕ್ಕೋಡಿ | ಚಿಕ್ಕೋಡಿ | 125 |
| 17. | ಸರ್ಕಾರಿ ಆಶ್ರಮ ಶಾಲೆ (ಎಸ್.ಟಿ) ಸದಲಗಾ | ಸದಲಗಾ | 50 |
| 18. | ಮಹಿಳಾ ಕಲ್ಯಾಣ ಕೇಂದ್ರ ಚಿಕ್ಕೋಡಿ | ಚಿಕ್ಕೋಡಿ | 50 |
| 19. | ಮಹಿಳಾ ಕಲ್ಯಾಣ ಕೇಂದ್ರ ಯಕ್ಸಂಬಾ | ಯಕ್ಸಂಬಾ | 50 |

| ಕ್ರ. ಸಂ. | ಸಂಸ್ಥೆಗಳ ಹೆಸರು | ಗ್ರಾಮ | ಮಂಜೂರಿ ಸಂಖ್ಯೆ |
|---|---|---|---|
| 20. | ಮಹಿಳಾ ಕಲ್ಯಾಣ ಕೇಂದ್ರ ಭೋಜ | ಭೋಜ | 50 |
| 21. | ಮಹಿಳಾ ಕಲ್ಯಾಣ ಕೇಂದ್ರ ಗಳತಗಾ | ಗಳತಗಾ | 50 |
| 22. | ಮಹಿಳಾ ಹೊಲಿಗೆ ತರಬೇತಿ ಕೇಂದ್ರ, ನಿಪ್ಪಾಣಿ | ನಿಪ್ಪಾಣಿ | 20 |

ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ, ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದಲ್ಲಿ ಪರಿಶಿಷ್ಟ ಜಾತಿ:ಪರಿಶಿಷ್ಟ ವರ್ಗಗಳ ಸರ್ವತೋಮುಖ ಅಭಿವೃದ್ಧಿಗಾಗಿ ಈ ಕೆಳಕಂಡ ಹಲವಾರು ಶೈಕ್ಷಣಿಕ ಮತ್ತು ಆರ್ಥಿಕ ನೆರವಿನ ಯೋಜನೆಗಳನ್ನು ಅನುಷ್ಠಾನ ಗೊಳಿಸಲಾಗುತ್ತಿದೆ.

1) ಕಾನೂನು ಪದವೀಧರರಿಗೆ ಧನಸಹಾಯ.
2) ಕಟ್ಟಡಗಳ ನಿರ್ವಹಣೆ.
3) ಪರಿಶಿಷ್ಟ ಜಾತಿ:ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ 1 ರಿಂದ 4ನೇ ತರಗತಿಯಲ್ಲಿ ಓದುತ್ತಿರುವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಮಂಜೂರಿ.
4) ಪರಿಶಿಷ್ಟ ಜಾತಿ:ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನಗಳು (5 ರಿಂದ 7 ಮತ್ತು 8 ರಿಂದ 10ನೇ ತರಗತಿ)
5) ಪ್ರತಿಭಾ ವಿದ್ಯಾರ್ಥಿವೇತನ.
6) ಪರಿಶಿಷ್ಟ ಜಾತಿ:ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ ಮಂಜೂರಿ (ಸಿ.ಎಸ್.ಎಸ್)
7) ಹೆಚ್ಚಿನ ಊಟ ಮತ್ತು ವಸತಿ ವೆಚ್ಚಗಳ ಸಹಾಯ ಮಂಜೂರಿ.
8) ಮೆಟ್ರಿಕ್‌ಪೂರ್ವ ವಿದ್ಯಾರ್ಥಿ ನಿಲಯಗಳ ನಿರ್ವಹಣೆ.
9) ಆಶ್ರಮ ಶಾಲೆ:ನಿವಾಸಿ ಶಾಲೆಗಳ ನಿರ್ವಹಣೆ.
10) ಅಸ್ಪೃಶ್ಯತಾ ನಿವಾರಣೆ.
11) ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ಶಿಷ್ಯ ವೇತನದ ಮಂಜೂರಿ.
12) ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಮೊದಲ ಸಲ ಪ್ರಥಮ ದರ್ಜೆಯಲ್ಲಿ ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ಪುರಸ್ಕಾರ ಬಹುಮಾನ.
13) ಅನೈರ್ಮಲ್ಯ ವೃತ್ತಿಯಲ್ಲಿ ತೊಡಗಿರುವ ಮಕ್ಕಳಿಗೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನ.
14) ಪಿ.ಯು.ಸಿ. 2, ಡಿಗ್ರಿ ಫೈನಲ್ ವರ್ಷದಲ್ಲಿ ಪ್ರಥಮ ಸಲ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದವರಿಗೆ ಬಹುಮಾನ ಹಣ ಮಂಜೂರಿ.
15) ಪರಿಶಿಷ್ಟ ಜಾತಿ:ಪರಿಶಿಷ್ಟ ವರ್ಗದ ಮಹಿಳಾ ವಿದ್ಯಾರ್ಥಿನಿಯರಿಗೆ 8 ರಿಂದ 10ನೇ ತರಗತಿಯವರಿಗೆ ಹೆಚ್ಚಿನ ಪ್ರೋತ್ಸಾಹಧನ ಮಂಜೂರಿ.
16) ಪರಿಶಿಷ್ಟ ಜಾತಿ:ಪರಿಶಿಷ್ಟ ವರ್ಗದವರ ಮನೆಗಳಿಗೆ ವಿದ್ಯುತ್ ಪೂರೈಕೆ (ಕುಟೀರ ಜ್ಯೋತಿ ಯೋಜನೆ ಅಡಿ)
17) ದೌರ್ಜನ್ಯಕ್ಕೆ ಒಳಪಟ್ಟ ಪರಿಶಿಷ್ಟ ಜಾತಿಯವರಿಗೆ ಪರಿಹಾರ (ಪರಿಶಿಷ್ಟ ಜಾತಿ:ಪರಿಶಿಷ್ಟ ವರ್ಗದವರಿಗೆ)
18) ಜಾತಿ ಪರಿಶೀಲನೆ.
19) ಅಂಬೇಡ್ಕರ್ ವಸತಿ ಯೋಜನೆ
20) ಆಶ್ರಯ ವಸತಿ ಯೋಜನೆ.
21) ಅಂತರ ಜಾತಿ ವಿವಾಹ ಪ್ರೋತ್ಸಾಹಧನ.
22) ವಿಶೇಷ ಘಟಕ ಯೋಜನೆ ಹಾಗೂ ಗಿರಿಜನ ಉಪಯೋಜನೆಗಳ ಅನುಷ್ಠಾನ.

**2) ಅಧಿಕಾರಿಗಳು ಮತ್ತು ನೌಕರರ ಅಧಿಕಾರಗಳು ಮತ್ತು ಕರ್ತವ್ಯಗಳು ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯವಿಧಾನ.**

ಮೇಲೆ ವಿವರಿಸಿರುವಂತೆ, ಶೀರ್ಷಿಕೆ (1)ರಲ್ಲಿ ತಿಳಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಎಲ್ಲಾ ವಿಷಯಗಳ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರವು ತಾಲ್ಲೂಕು ಮಟ್ಟದಲ್ಲಿ ಸಂಬಂಧಿಸಿದ ತಾಲ್ಲೂಕು ಪಂಚಾಯತ್‌ನ ಕಾರ್ಯ ನಿರ್ವಹಣಾ ಅಧಿಕಾರಿಗಳಿಗೆ ಇರುತ್ತದೆ.

**ಅಧಿಕಾರಿಗಳ ಕರ್ತವ್ಯಗಳು: ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕರ್ತವ್ಯಗಳು.**

**ಮೂಲ ಕರ್ತವ್ಯಗಳು**

1. ತಾಲ್ಲೂಕಿನ ಪರಿಶಿಷ್ಟ ಜಾತಿ:ಪರಿಶಿಷ್ಟ ವರ್ಗಗಳ ಜನರ ಕಲ್ಯಾಣ ಕಾರ್ಯಕ್ರಮಗಳ ಅನುಷ್ಠಾನ ಅಧಿಕಾರಿಯಾಗಿ ಕಾರ್ಯನಿರ್ವಹಿಸುವುದು.
2. ಪ್ರತಿ ತಿಂಗಳು ಕನಿಷ್ಟ ಪಕ್ಷ 15 ದಿನ ಪ್ರವಾಸಮಾಡುವುದು ಹಾಗೂ 10 ದಿನ ಹಳ್ಳಿಗಳಲ್ಲಿ ವಾಸ್ತವ್ಯ ಮಾಡುವುದು ಹಾಗೂ ಪರಿಶಿಷ್ಟ ಜಾತಿ:ಪರಿಶಿಷ್ಟ ವರ್ಗದ ಜನರ ಕಾಲೋನಿಗಳಿಗೆ ತಪ್ಪದೇ ಭೇಟಿನೀಡುವುದು.
3. ಇಲಾಖೆಯ ವಾರ್ಷಿಕ ಯೋಜನೆಯನ್ನು ತಯಾರಿಸಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್ ಹಾಗೂ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳವರಿಂದ ಒಪ್ಪಿಗೆ ಪಡೆದು ಹಣ ಬಿಡುಗಡೆ ಮಾಡಿಸಿಕೊಳ್ಳುವುದು.

4. ತಾಲ್ಲೂಕಿನ ಸಮಾಜ ಕಲ್ಯಾಣ ಇಲಾಖೆಯ ಸಂಸ್ಥೆಗಳ ಮುಖ್ಯಸ್ಥರ ಕಾರ್ಯನಿರ್ವಹಣೆಯನ್ನು ಪರಿಶೀಲಿಸುವುದು. ಹಾಗೂ ಕಾರ್ಯಾಲಯದ ಸಿಬ್ಬಂದಿಯವರ ಕೆಲಸವನ್ನು ತಪಾಸಣೆ ಮಾಡುವುದು.
5. ಮೇಲಾಧಿಕಾರಿಗಳಿಗೆ ತಿಂಗಳ, 3 ತಿಂಗಳ, ಅರ್ಧ ವರ್ಷದ ಹಾಗೂ ವರ್ಷದಲ್ಲಿ ಸಾಧಿಸಿದ ಪ್ರಗತಿ ಪತ್ರಿಕೆಗಳನ್ನು ಸಲ್ಲಿಸುವುದು.
6. ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳಿಗೆ ತಿಂಗಳ ಖರ್ಚಿನ ಮಾಹಿತಿ, ಪಿರಾಡಿಕಲ್ಸ್ ಮಾಹಿತಿ ಹಾಗೂ ಚೆಕ್ಕುಗಳ ಶಿಷ್ಯವೇತನ ಮಂಜೂರು ಮಾಡಿ ಚೆಕ್ ಅಕೌಂಟ್ಸ್ ಮಾಹಿತಿ ತಯಾರಿಸಿ ಸಲ್ಲಿಸುವುದು.
7. ತಾಲ್ಲೂಕಿನಲ್ಲಿರುವ ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗದ ಶಾಲೆಗಳಿಗೆ ಹೋಗುವ ಮಕ್ಕಳ ಮಾಹಿತಿಯನ್ನು ಹಾಗೂ ಮೂಲಭೂತ ಮಾಹಿತಿಯನ್ನು ತಯಾರಿಸಿ ಇಡುವುದು.

**ಶಿಕ್ಷಣ:-**

8. ಪರಿಶಿಷ್ಟ ಜಾತಿ:ಪರಿಶಿಷ್ಟ ವರ್ಗದ 1 ರಿಂದ 10ನೇ ತರಗತಿಯ ಮೆಟ್ರಿಕ್ ಪೂರ್ವ ಶಿಷ್ಯವೇತನ ಹಾಗೂ ಮೆಟ್ರಿಕ್ ನಂತರದ ಶಿಷ್ಯವೇತನ ಮಂಜೂರು ಮಾಡುವುದು ಹಾಗೂ ಅದರ ಲೆಕ್ಕಪತ್ರ ಇಡುವುದು ಮತ್ತು ಶಿಷ್ಯವೇತನ ಹಂಚಿಕೆಯಾದ ಪಾವತಿಗಳನ್ನು ಇಡುವುದು.
9. ತಾಲ್ಲೂಕಿನಲ್ಲಿಯ ಎಲ್ಲಾ ಸಮಾಜ ಕಲ್ಯಾಣ ಇಲಾಖೆಯ ಸಂಸ್ಥೆಗಳ ಪರಿವೀಕ್ಷಣೆ ಮಾಡುವುದಲ್ಲದೆ, ಅನುದಾನಿತ ಮೆ.ಪೂರ್ವ ಮತ್ತು ಮೆ.ನಂತರದ ವಸತಿ ನಿಲಯಗಳನ್ನು ವೀಕ್ಷಣೆ ಮಾಡುವುದು.
10. ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಪ್ರಥಮ ಬಾರಿಗೆ ಪ್ರಥಮ ದರ್ಜೆಯಲ್ಲಿ ಪಾಸಾದ ವಿದ್ಯಾರ್ಥಿಗಳಿಗೆ ನಗದು ಬಹುಮಾನ ಹಣ ವಿತರಣೆ ಮಾಡುವುದು.
11. ಪರಿಶಿಷ್ಟ ಜಾತಿ:ಪರಿಶಿಷ್ಟ ವರ್ಗದ ಶಾಲೆಗೆ ಹೋಗುವ ಮಕ್ಕಳಿಗೆ ಪುಕ್ಕಟೆಯಾಗಿ ಕೊಡುವ ಸಮವಸ್ತ್ರ ಹಾಗೂ ಪಠ್ಯ ಪುಸ್ತಕಗಳನ್ನು ಹಾಗೂ ಇತರೆ ಶೈಕ್ಷಣಿಕ ಸಹಾಯವನ್ನು ಸರಿಯಾಗಿ ವಿತರಣೆ ಮಾಡಿದ್ದಾರೆಯೇ ಹೇಗೆ ಅನ್ನುವುದನ್ನು ಖಚಿತಪಡಿಸಿಕೊಳ್ಳುವುದು.
12. ಪರಿಶಿಷ್ಟ ಜಾತಿಯ ಜನರ ಕಾಲೋನಿಯಲ್ಲಿ ವಯಸ್ಕರ ಶಿಕ್ಷಣ ಯುವಜನ ಇಲಾಖೆ ಹಾಗೂ ಸಹಕಾರ ಇಲಾಖೆಯ ವತಿಯಿಂದ ಸಂಸ್ಥೆಗಳನ್ನು ಸ್ಥಾಪಿಸುವುದರಲ್ಲಿ ಸಹಕಾರ ನೀಡುವುದು.
13. ಶಿಕ್ಷಣ ಸಂಸ್ಥೆಗಳಲ್ಲಿ ಶಿಷ್ಯವೇತನ ಸರಿಯಾಗಿ ವಿತರಣೆ ಮಾಡಿದ ಬಗ್ಗೆ ಹಾಗೂ ಬುಕ್ ಬ್ಯಾಂಕ್ ಯೋಜನೆಯಲ್ಲಿ ನೀಡಿದ ಸವಲತ್ತುಗಳನ್ನು ಉಪಯೋಗಿಸಿದ ಬಗ್ಗೆ ತಪಾಸಣೆ ಮಾಡುವುದು.
14. ವಸತಿನಿಲಯಗಳ ಕಟ್ಟಡ ಕಟ್ಟುವುದು, ಸಮಾಜ ಮಂದಿರ ಕಟ್ಟುವುದು, ಕಲ್ಯಾಣ ಮಂದಿರ ಕಟ್ಟುವುದು ಹಾಗೂ ಶಾಲಾ ಕಟ್ಟಡಗಳನ್ನು ಕಟ್ಟುವುದನ್ನು ಪರಿಶೀಲಿಸುವುದು ಹಾಗೂ ಕಾರ್ಯಗತ ಮಾಡುವುದು.
15. ಬಿ.ಎಸ್.ಪಿ. ಯೋಜನೆ ಹೊರತುಪಡಿಸಿ ಹುಡ್ಕೋ ಎನ್.ಆರ್.ಇ.ಪಿ.ಪಿ.ಎಲ್.ಜಿ.ಆರ್.ಎಲ್.ಸಿ.ಎಜೆ. ಯೋಜನೆ ಅಡಿಯಲ್ಲಿ ಯೋಗ್ಯ ಫಲಾನುಭವಿಗಳನ್ನು ಗುರುತಿಸುವುದು ಹಾಗೂ ಆಯ್ಕೆ ಮಾಡಿ ಸಂಬಂಧಿಸಿದ ಇಲಾಖೆಗೆ ಒದಗಿಸುವುದು.
16. ಪರಿಶಿಷ್ಟ ಜಾತಿ:ಪರಿಶಿಷ್ಟ ವರ್ಗದ ಜನರ ಮೇಲೆ ನಡೆದ ದೌರ್ಜನ್ಯ ಪ್ರಕರಣಕ್ಕೆ ಸಂಬಂಧಿಸಿದಂತೆ ಸಿ.ಆರ್. ಸೆಲ್ಲಿನ ಅಧಿಕಾರಿಗಳೊಂದಿಗೆ ಸಹಕರಿಸುವುದು ಹಾಗೂ ತಾಲ್ಲೂಕು ಮಟ್ಟದ ನಾಗರೀಕ ಹಕ್ಕು ಸಂರಕ್ಷಣಾ ಸಮಿತಿಯ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುವುದು.
17. ನೈಸರ್ಗಿಕವಾಗಿ ಲುಕ್ಸಾನು ಮತ್ತು ಬೆಂಕಿ ಅನಾಹುತದಲ್ಲಿ ನೊಂದ ಸಂತ್ರಸ್ತರಿಗೆ ಧನ ಸಹಾಯಮಾಡುವಲ್ಲಿ ಪ್ರಯತ್ನಿಸುವುದು.
18. ಪ.ಜಾತಿ:ಪ.ವರ್ಗದ ಜನರ ಸಲುವಾಗಿ ಮನೆ, ಜಾಗೆ, ಸ್ಮಶಾನ ಜಾಗೆ, ಈಗಿನ ಕಾಲೋನಿಯನ್ನು ಹೆಚ್ಚಿಸುವ ಬಗ್ಗೆ ಹಾಗೂ ಪ್ರತ್ಯೇಕ ಕಾಲೋನಿ ನಿರ್ಮಾಣದ ಬಗ್ಗೆ ಸಮಾಜ ಕಲ್ಯಾಣ ಇಲಾಖೆಯ ಸಂಸ್ಥೆಗಳ ಕಟ್ಟಡದ ನಿರ್ಮಾಣ ಬಗ್ಗೆ, ಭೂಮಿ ಖರೀದಿ ಬಗ್ಗೆ ಪ್ರಕರಣಗಳನ್ನು ತಯಾರಿಸುವುದು, ಪ.ಜಾತಿ:ಪ.ವರ್ಗದ ಜನರಿಗೆ ಮನೆಗಳ ನಿರ್ಮಾಣ ಮಾಡಲು ಮಂಜೂರಾದ ಭೂಮಿಯನ್ನು ಹಾಗೂ ಲೀಜ್ ಮೇಲೆ ಕೊಟ್ಟ ಭೂಮಿಯನ್ನು ವಶಪಡಿಸಿಕೊಳ್ಳುವ ಕ್ರಮ ಜರುಗಿಸುವುದು. ಸರ್ಕಾರಿ ಗ್ರಾಮಠಾಣಾ ಜಾಗೆಯನ್ನು ಅಭಿವೃದ್ಧಿಪಡಿಸಲು ಮತ್ತು ಮನೆ ಕಟ್ಟಲು ಕಂದಾಯ ಇಲಾಖೆಯಿಂದ ಪಡೆದು ಕೊಳ್ಳುವ ಕ್ರಮ ಜರುಗಿಸುವುದು.

**ಆರ್ಥಿಕಾಭಿವೃದ್ಧಿ:**

19. ಪ.ಜಾತಿ:ಪ.ವರ್ಗದ ಜನರ ಒಕ್ಕಲುತನ ಕಾಲೋನಿಗಳನ್ನು ನಿರ್ವಹಿಸುವುದು ಹಾಗೂ ಜಾಯಿಂಟ್ ಫಾರ್ಮ್ ಕೈಗಾರಿಕಾ, ಕೂಲಿಕಾರ ಸಹಕಾರಿ ಸಂಘಗಳನ್ನು ಅವರ ಅನುಕೂಲಕ್ಕಾಗಿ ಮಾಡುವುದು.
20. ತಾಲ್ಲೂಕಿನಲ್ಲಿ ಪ.ಜಾತಿ:ಪ. ವರ್ಗದ ಸೋಷಿಯಲ್ ಹಾಗೂ ಎಕನಾಮಿಕ್ ಸರ್ವೆ ಮಾಡಿ ಫಲಾನುಭವಿಗಳನ್ನು ವಿಶೇಷ ಘಟಕ ಯೋಜನೆ, ಐ.ಆರ್.ಡಿ.ಪಿ: ಬಿ.ಎಸ್.ಪಿ: ಅಂತ್ಯೋದಯ: ಟ್ರಾಯಿಜಂ: ತಾಳಿಭಾಗ್ಯ: ಐಆರ್‌ಡಿಸಿ: ಗಂಗಾಕಲ್ಯಾಣ ಭಾಗ್ಯ ಜ್ಯೋತಿ ಹಾಗೂ ನೇಗಿಲ ಭಾಗ್ಯ ಯೋಜನೆಗಳಿಗೆ ಗುರುತಿಸಿ ಸದರಿ ಯೋಜನೆಗಳನ್ನು ಕಾರ್ಯಗತ ಮಾಡುವುದು.
21. ಭೂ ರಹಿತ ಕಾರ್ಮಿಕರನ್ನು ಗುರುತಿಸುವುದು.
22. ಸ್ಥಳೀಯ ಸಂಸ್ಥೆಗಳಲ್ಲಿ ಕಾಯ್ದಿರಿಸಿದ ಶೇ. 18 ಮತ್ತು 20ರ ಹಣದಲ್ಲಿ ಯೋಜನೆಗಳನ್ನು ಕಾರ್ಯಗತ ಮಾಡುವುದು.
23. ಅಂತರ್‌ಜಾತಿ ವಿವಾಹವಾದ ದಂಪತಿಗಳಿಗೆ ಸಹಾಯಧನ ಮಂಜೂರು ಕುರಿತು ಪ್ರಕರಣ ತಯಾರಿಸುವುದು.

24. ಪ.ಜಾತಿಯ ಜನರ ವಾಸದ ಮನೆಗಳಿಗೆ ಹಾಗೂ ಕಾಲೋನಿಗಳಿಗೆ ವಿದ್ಯುತ್ ಪೂರೈಕೆ ಕುರಿತು ಹಾಗೂ ಕುಡಿಯುವ ನೀರಿನ ಪೂರೈಕೆ ಕುರಿತು ಸಮೀಕ್ಷೆ ಮಾಡುವುದು.
25. ಪ.ಜಾತಿ:ಪ.ವರ್ಗದ ಜನರು ಯಾರು ವೃದ್ಧಾಪ್ಯವೇತನ, ವಿಧವಾ ವೇತನ, ಹೆರಿಗೆ ಭತ್ಯೆ, ಅಂಗವಿಕಲರ ಭತ್ಯೆ ಮತ್ತು ಕ್ರಾನಿಕ್ ರೋಗದಿಂದ ಬಳಲುವವರೋ ಅಂತಹ ಫಲಾನುಭವಿಗಳನ್ನು ಗುರುತಿಸಿ ಸಂಬಂಧಿಸಿದ ಅಧಿಕಾರಿಗಳಿಗೆ ಭೇಟಿಯಾಗಿ ಮಂಜೂರಿಸುವುದು.
26. ಪ.ಜಾತಿ:ಪ.ವರ್ಗದ ಜನರು ತಮ್ಮ ಭೂಮಿಗಳನ್ನು ಮರಳಿ ಪಡೆಯುವಲ್ಲಿ ಸಹಾಯ ಮಾಡುವುದು ಹಾಗೂ ಭೂಮಿ ಮಂಜೂರಿಯಲ್ಲಿಯೂ ಸಹಾಯ ಮಾಡುವುದು.

**ಇತರೆ**

27. ಸರ್ಕಾರಿ ಇಲಾಖೆ, ಅರೆ ಸರ್ಕಾರಿ ಇಲಾಖೆ, ಸ್ಥಳೀಯ ಸಂಸ್ಥೆ ಮತ್ತು ಔದ್ಯೋಗಿಕಗಳಲ್ಲಿ ಪ.ಜಾತಿ:ಪ.ವರ್ಗದ ಅಭ್ಯರ್ಥಿಗಳನ್ನು ಸರ್ಕಾರಿ ನಿಯಮಾವಳಿ ಪ್ರಕಾರ ನೇಮಕಾತಿ ಮಾಡಿದ ಬಗ್ಗೆ ಪರಿಶೀಲನೆ ಮಾಡಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳಿಗೆ ವರದಿ ಸಲ್ಲಿಸುವುದು.
28. ಇತರೆ ಇಲಾಖೆಯಿಂದ ಜಾತಿ ಪರಿಶೀಲನೆಗೆ ಬಂದ ಜಾತಿ ಪ್ರಮಾಣ ಪತ್ರಗಳ ಸಿಂಧುತ್ವವನ್ನು ಪರಿಶೀಲನೆ ಮಾಡುವುದು.
29. ಸರ್ಕಾರಿ ಸಂಘಗಳಲ್ಲಿ, ಯೂತ್ ಕ್ಲಬ್‌ಗಳಲ್ಲಿ, ಮಹಿಳಾ ಮಂಡಳಿಗಳಲ್ಲಿ, ಸ್ಥಳೀಯ ಅಭಿವೃದ್ಧಿಯ ಬ್ಯಾಂಕ್‌ಗಳಲ್ಲಿ ಪರಿಶಿಷ್ಟ ಜಾತಿ: ಪ.ವರ್ಗದ ಜನರು ಸದಸ್ಯತ್ವ ಹೊಂದಲು ಪ್ರೋತ್ಸಾಹಿಸುವುದು.
30. ಕಾರ್ಯನಿರ್ವಾಹಕ ಅಧಿಕಾರಿಗಳು, ತಾಲ್ಲೂಕು ಪಂಚಾಯತ್ : ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ಅಧಿಕಾರಿಗಳು ಹಾಗೂ ಆಯುಕ್ತರು ಸಮಾಜ ಕಲ್ಯಾಣ ಇಲಾಖೆರವರು ವಹಿಸುವ ಯಾವುದೇ ಕೆಲಸ ಕಾರ್ಯಗಳನ್ನು ನಿರ್ವಹಿಸುವರು.

**3) ಕಛೇರಿ ಸಿಬ್ಬಂದಿಯವರ ಕರ್ತವ್ಯ ನಿರ್ವಹಣೆ ವಿವರಗಳು**

ಕಛೇರಿ ಸಿಬ್ಬಂದಿ ವರ್ಗದವರು ಹಾಗೂ ಸಂಬಂಧಿಸಿದ ಅಧಿಕಾರಿಗಳ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಆಯಾಯ ಅಧಿಕಾರಿಗಳಿಗೆ ಪೂರಕವಾಗಿ ಸಹಾಯವಾಗುವಂತೆ ಕಾರ್ಯನಿರ್ವಹಿಸುವರು. ಸಾರ್ವಜನಿಕರಿಂದ, ಮೇಲಾಧಿಕಾರಿಗಳ ಕಛೇರಿಯಿಂದ ಹಾಗೂ ಅಧೀನ ಅಧಿಕಾರಿಗಳಿಂದ ಬರುವಂತಹ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ, ಸಂಬಂಧಿಸಿದ ಅಧಿಕಾರಿಗಳ ಹಾಗೂ ಕಛೇರಿ ಅಧೀಕ್ಷಕರ ಕಿರು ಸಹಿ ಮಾಡಿಸಿದ ನಂತರ, ಸದರಿ ಪತ್ರಗಳನ್ನು ನೋಂದಾಯಿಸಿ, ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ಸ್ವೀಕೃತಿ ಪಡೆದು ನೀಡಲಾಗುವುದು.

ತುರ್ತು ಟಪಾಲುಗಳ ಬಗ್ಗೆ ಆದ್ಯತೆ ಮೇರೆಗೆ ವಿಷಯ ನಿರ್ವಾಹಕರ ಕಛೇರಿ ಕೈಪಿಡಿಯ ಪ್ರಕಾರ, ಕಡತವನ್ನು ಪ್ರಾರಂಭಿಸಿ, ಅಧಿಕಾರಿಗಳ ಅನುಮೋದನೆಗಾಗಿ ಅಥವಾ ಮಂಜೂರಾತಿಗಾಗಿ ಕ್ರಮ ಕೈಗೊಳ್ಳುವರು.

ಸದರಿ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳ ವಿವರ.

| ಕ್ರ. ಸಂ. | ಹೆಸರು | ಹುದ್ದೆ | ವಹಿಸಿಕೊಟ್ಟ ಶಾಖೆ |
|---|---|---|---|
| 1) | ಶ್ರೀ ಸಿ.ಬಿ. ರಜಪೂತ | ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು | ಒಟ್ಟಾರೆ ಮೇಲ್ವಿಚಾರಣೆ ಮತ್ತು ಯೋಜನೆಗಳ ಅನುಷ್ಠಾನ. |
| 2) | ಶ್ರೀ ಡಿ.ಕೆ. ಹೊಸಮನಿ | ಕಛೇರಿ ಅಧೀಕ್ಷಕರು | ಕಛೇರಿ ಮೇಲ್ವಿಚಾರಣೆ, ಕುಂದು ಕೊರತೆಗಳು, ದೌರ್ಜನ್ಯ ಪ್ರಕರಣಗಳ ನಿರ್ವಹಣೆ ಅಂತರ ಜಾತಿ ವಿವಾಹವಾದವರಿಗೆ ಸಹಾಯಧನ ವಿಶೇಷ ಘಟಕ ಯೋಜನೆ ಟಿ.ಎಸ್.ಪಿ. ಯೋಜನೆ ಇತ್ಯಾದಿ. |
| 3) | ಶ್ರೀ ಡಿ.ಡಿ. ಮುಗಳಿ | ಪ್ರಭಾರ ಪ್ರ.ದ.ಸಹಾಯಕರು | ಲೆಕ್ಕಪತ್ರ:ಸಿಬ್ಬಂದಿ:ಆಯುಕ್ತರು. ಸ.ಕ ಇ.ಜಿ.ಪಂ.ಸಿಬ್ಬಂದಿ ಮತ್ತು ಆಡಳಿತ:ಜಿಸಕಅ:ಎ.ಜಿ.ತಪಾಸಣೆಗಳಿಗೆ ಅನುಸರಣೆ:ಎಲ್‌ಎಕ್ಯೂ ಎಲ್.ಸಿ. ಪ್ರಶ್ನೆಗಳು:ವೇತನ ಪಾವ್ತಿ:ಕ್ಯಾಶ್‌ಬುಕ್ ನಿರ್ವಹಣೆ:ಆರ್.ಡಿ. ನಿರ್ವಹಣೆ:ಸಿಬ್ಬಂದಿಗಳ ಸೇವಾ ಪುಸ್ತಕಗಳ ನಿರ್ವಹಣೆ:ಸಾದಿಲ್ವಾರು ಬಿಲ್ಲುಗಳನ್ನು ಮಾಡುವುದು:ಸ್ಟೇಷನರಿ ಖರೀದಿ ಹಾಗೂ ವಿಲೇವಾರಿ ತಾಸಕಅ:ಹೆಸರಿನಲ್ಲಿರುವ ಎಸ್.ಬಿ. ಖಾತೆ ನಿರ್ವಹಣೆ ಇತ್ಯಾದಿ. |
| 4) | ಶ್ರೀ ಡಿ.ಡಿ. ಮುಗಳಿ | ದ್ವಿತೀಯ ದರ್ಜೆ ಸಹಾಯಕರು | ಭಾರತ ಸರಕಾರ ಶಿಷ್ಯ ವೇತನ:1ರಿಂದ 10:ಲೇಡಿಸ್. ಗ್ರಾಪಂ.ಜಮಾಬಂದಿ:ಬಹುಮಾನ ಹಣ ಮಂಜೂರಿ:ಇತ್ಯಾದಿ ವಿಷಯಗಳ ನಿರ್ವಹಣೆ:ಅವಕ ಜಾವಕ:ಸ್ಟಾಂಪ್ ಖರೀದಿ ಹಾಗೂ ಖರ್ಚಿನ ಲೆಕ್ಕ ಇಡುವುದು ಇತ್ಯಾದಿ. |
| 5) | ಖಾಲಿ ಹುದ್ದೆ | ಬೆರಳಚ್ಚುಗಾರರು | ಬೆರಳಚ್ಚು:ತಾ.ಸ.ಕ.ಅ.ಗಳ ಡೈರಿ ಮುಂಗಡ ಪ್ರವಾಸ ಕಾರ್ಯಕ್ರಮ: ತನಿಖಾ ವರದಿಗಳ ತಯಾರಿಕೆ ಇತ್ಯಾದಿ. |

| ಕ್ರ. ಸಂ. | ಹೆಸರು | ಹುದ್ದೆ | ವಹಿಸಿಕೊಟ್ಟ ಶಾಖೆ |
|---|---|---|---|
| 6) | ಶ್ರೀ ಎ.ಎಚ್. ಚೋಪದಾರ | ಜವಾನ | ಕಛೇರಿ ಕಾವಲು:ಸ್ವಚ್ಛತೆ:ಟಪಾಲು ಹಂಚಿಕೆ:ಟ್ರೆಜರಿಯಿಂದ ಹಣ ತರುವುದು ಹಾಗೂ ರಾತ್ರಿ ಕಾವಲು ಇತ್ಯಾದಿ. |

**4) ಇಲಾಖೆಯು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ರೂಪಿಸಿರುವ ಗುಣಮಟ್ಟಗಳು:-**

1) ಕಛೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ನೊಂದಾಯಿಸಿ, ಆ ದಿನವೇ ವಿಷಯ ನಿರ್ವಾಹಕರಿಗೆ ನೀಡುವಂತಹ ವ್ಯವಸ್ಥೆ ಹಾಗೂ ನಿಗದಿತ ಅವಧಿಯೊಳಗೆ ಇತ್ಯರ್ಥಪಡಿಸುವುದು.

2) ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆ ಮಾಡಲು ಮಾಸಿಕ ಸಭೆಗಳನ್ನು ಏರ್ಪಡಿಸುವುದು.

3) ಆಗಿಂದಾಗ್ಗೆ ಅಧಿಕಾರಿಗಳಿಂದ ಹಾಗೂ ಕಛೇರಿ ಅಧೀಕ್ಷಕರಿಂದ ವಿಷಯ ನಿರ್ವಾಹಕರ ಮೇಜು ತಪಾಸಣೆ ಕಾರ್ಯ.

4) ಇಲಾಖಾ ಸಂಸ್ಥೆಗಳ ಸಿಬ್ಬಂದಿ ವರ್ಗದವರಿಗೆ ಕಾರ್ಯಾಗಾರ ನಡೆಸುವುದು.

5) ಸರಕಾರವು / ಮೇಲಾಧಿಕಾರಿಗಳು ನೀಡುವ ಆದೇಶಗಳನ್ನು ಹಾಗೂ ಸುತ್ತೋಲೆಗಳನ್ನು ತ್ವರಿತಗತಿಯಲ್ಲಿ ಕ್ರಮ ಜರುಗಿಸಿ ಇತ್ಯರ್ಥಪಡಿಸುವುದು.

6) ಸಾರ್ವಜನಿಕ ಕುಂದುಕೊರತೆಗಳ ನಿವಾರಣೆಯ ಬಗ್ಗೆ ಸಾರ್ವಜನಿಕರಿಗೆ ಸೂಕ್ತ ಮಾಹಿತಿ ನೀಡುವುದು.

**5) ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರಿಕರಿಗೆ ದೊರೆಯಬಹುದಾದ ಅನುಕೂಲತೆಯ ವಿವರಗಳು**

1) ಇಲಾಖೆಯ ಕಾರ್ಯಕ್ರಮ ಹಾಗೂ ಯೋಜನೆಗಳಿಗೆ ಸಂಬಂಧಿಸಿದ ಮಾಹಿತಿಗಳು, ಆದೇಶಗಳು, ವಾರ್ಷಿಕ ಸಂಕಲನ, ಕ್ರಿಯಾಯೋಜನೆ ಹಾಗೂ ಕಿರುಹೊತ್ತಿಗೆಗಳನ್ನು ಸಾರ್ವಜನಿಕರ ಪ್ರಕಟಣೆಗಾಗಿ ನೀಡುವುದು.

2) ಸಾರ್ವಜನಿಕ ಕುಂದುಕೊರತೆಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕ ಸಂಪರ್ಕಾಧಿಕಾರಿಗಳನ್ನು ನೇಮಿಸುವುದು. (ಶ್ರೀ ಡಿ.ಡಿ. ಮುಗಳಿ. ಪ್ರ.ದ.ಸ.)

3) ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ರೀತ್ಯಾ ರಾಜ್ಯ ಮಟ್ಟದಲ್ಲಿ, ಜಂಟಿ ನಿರ್ದೇಶಕರು (ವಿ.ಫ.ಯೋ) ಯವರನ್ನು ಸಕ್ಷಮ ಪ್ರಾಧಿಕಾರವಾಗಿ ಹಾಗೂ ಸಮಾಜಕಲ್ಯಾಣ ಆಯುಕ್ತರವರನ್ನು ಮೇಲ್ಮನವಿ ಪ್ರಾಧಿಕಾರವನ್ನಾಗಿ, ಹಾಗೂ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳನ್ನು ಸಕ್ಷಮ ಪ್ರಾಧಿಕಾರವನ್ನಾಗಿ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್‌ರವರನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿಯೂ, ಅದೇ ರೀತಿ ತಾಲ್ಲೂಕು ಮಟ್ಟದಲ್ಲಿ ಕಛೇರಿ ಅಧೀಕ್ಷಕರನ್ನು ಸಕ್ಷಮ ಪ್ರಾಧಿಕಾರಿಯಾಗಿ ಹಾಗೂ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ನೇಮಿಸಲಾಗಿದೆ.

4) ಇಲಾಖೆಯಲ್ಲಿ ಮಂಜೂರಾತಿಗಾಗಿ ನೀಡಲಾಗಿರುವ ಕಾಲಾವಧಿ ನಿಗದಿ ವಿಚಾರಗಳನ್ನು ಸಾರ್ವಜನಿಕರಿಗೆ ತಿಳಿಸುವಂಥಹ ಕಾರ್ಯಪಟ್ಟಿ ಮಾಡಿ ಪ್ರಕಟಿಸಿದೆ.

ಪಿ.ಆರ್. 863 ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು ಚಿಕ್ಕೋಡಿ

**ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಕೊಪ್ಪಳ**

**ಪ್ರಕರಣ ಸಂಖ್ಯೆ:ಕಾಅಕೊ:ಕಾನಪ:F/186:2004 ದಿನಾಂಕ:4ನೇ ಜೂನ್ 2004**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

ಅರ್ಜಿದಾರರು:

1. ಶ್ರೀಮತಿ ಲಕ್ಷ್ಮವ್ವ ಗಂಡ ಶರಣಪ್ಪ R/o ಕುರುಬನಾಳ ತಾ।। ಕುಷ್ಟಗಿ ಜಿಲ್ಲಾ ಕೊಪ್ಪಳ.
2. ಸಂಗಮ್ಮ ಗಂಡ ಗಂಗಪ್ಪ R/o ಕುರಬನಾಳ ತಾ।।ಕುಷ್ಟಗಿ.

ಪ್ರತಿವಾದಿಗಳು:

1. ಡಾ।।ಗುರುರಾಜ ಬಿ.ದೇಸಾಯಿ ತಂದೆ ಭೀಮಪ್ಪಯ್ಯ ದೇಸಾಯಿ ವಾಹನ ಸಂಖ್ಯೆ KA 37/3317 ವಿದ್ಯಾನಗರ ಕುಷ್ಟಗಿ ಜಿ।।ಕೊಪ್ಪಳ.
2. ಡಿವಿಜನಲ್ ಮ್ಯಾನೇಜರ್, ದಿ ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ., ಬಳ್ಳಾರಿ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ:ಗಾಯ:ಶ್ರೀ ಶರಣಪ್ಪ ಎಂಬುವವರು ಪ್ರತಿವಾದಿಯಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ಕೆಲಸದಿಂದುಂಟಾದ ಅಪಘಾತದಿಂದ ಮೃತ:ಗಾಯ:ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923 ರಡಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಮೃತ:ಗಾಯ: ಶರಣಪ್ಪ ರಾದ ಶ್ರೀ:ಶ್ರೀಮತಿ ಲಕ್ಷ್ಮವ್ವ & ಸಂಗಮ್ಮ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರೂ ಅಥವಾ ತಾವೂ ಸಹ ಮೃತ:ಗಾಯ: ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನದೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದ್ರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿಗಳು ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಪಿ.ಆರ್. 865 ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೊಪ್ಪಳ ಜಿಲ್ಲೆ, ಕೊಪ್ಪಳ.

## ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಕೊಪ್ಪಳ

**ಪ್ರಕರಣ ಸಂಖ್ಯೆ:ಕಾಅಕೊ:ಕಾನಪ:2004 ದಿನಾಂಕ:4ನೇ ಜೂನ್ 2004**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| ಶ್ರೀಮತಿ ಶಾಂತಮ್ಮ ಗಂಡ ಶರಣಪ್ಪ ಪಟ್ಟಣಶೆಟ್ಟಿ ಸಾ।। ಬೆಣಕಲ್ ತಾ।। ಕುಷ್ಟಗಿ ಜಿ।। ಕೊಪ್ಪಳ. | | 1. ಶ್ರೀ ಮಲ್ಲಪ್ಪ ಸಿ. ರಾಜೂರ ವಾಹನ ಸಂಖ್ಯೆ KA-37/3841 R/o ಬೆಣಕನಾಳ ತಾ।।ಕುಷ್ಟಗಿ, ಜಿ।।ಕೊಪ್ಪಳ.<br>2. ದಿ ನ್ಯೂ ಇಂಡಿಯಾ ಅಸೂರೆನ್ಸ್ ಕಂ. ಲಿ., ನ್ಯೂಕಾಟನ್ ಮಾರ್ಕೆಟ್, ಹುಬ್ಬಳ್ಳಿ. |

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇಂದರೆ ಮೃತ:ಗಾಯ:ಶ್ರೀ ಬಸವರಾಜ ಎಂಬುವವರು ಪ್ರತಿವಾದಿಯಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ 14.5.2004 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ:ಗಾಯ:ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923 ರಡಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಮೃತ:ಗಾಯ: ಬಸವರಾಜ ರವರ ವಾರಸುದಾರರಾದ ಶ್ರೀ:ಶ್ರೀಮತಿ ಶಾಂತಮ್ಮ & ಶರಣಪ್ಪ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರೂ ಅಥವಾ ತಾವೂ ಸಹ ಮೃತ:ಗಾಯ: ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನದೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದ್ರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿಗಳು ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದು ಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಪಿ.ಆರ್. 866 ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೊಪ್ಪಳ ಜಿಲ್ಲೆ, ಕೊಪ್ಪಳ.

## ಸಹಕಾರ ಸಂಘಗಳ ನಿಬಂಧಕರು ಕರ್ನಾಟಕ ರಾಜ್ಯ ಬೆಂಗಳೂರು ಇವರ ನಡವಳಿಗಳು

**ವಿಷಯ:** ಕರ್ನಾಟಕ ಕಂಟ್ರಾಕ್ಟರ್ಸ್ ಸಹಕಾರ ಬ್ಯಾಂಕ್ (ನಿ) ಬೆಂಗಳೂರು ಇದನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72 ಎ ರೀತ್ಯಾ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:**
1. ಭಾರತೀಯ ರಿಸರ್ವ್ ಬ್ಯಾಂಕ್ ಮುಂಬೈ ಇದರ ಕಾರ್ಯನಿರ್ವಾಹಕ ನಿರ್ದೇಶಕರ ಪತ್ರ ಸಂಖ್ಯೆ:ಯುಬಿಡಿ: ಬಿಎಸ್‌ಡಿ(IV)-35-12.03.1738/2003-04 ದಿನಾಂಕ 8.02.2004.
2. ಬ್ಯಾಂಕಿನವರು ಈ ಕಛೇರಿಗೆ ಸಲ್ಲಿಸಿರುವ ಪ್ರಸ್ತಾವನೆ ದಿನಾಂಕ 17.03.2004.
3. ಕರ್ನಾಟಕ ಸರ್ಕಾರದ ಪತ್ರ ಸಂಖ್ಯೆ:ಸಿಎಂಡಬ್ಲ್ಯೂ/46/ಸಿಎಲ್ಎಂ/2004 ದಿನಾಂಕ: 5.04.2004.
4. ಭಾರತೀಯ ರಿಸರ್ವ್ ಬ್ಯಾಂಕ್, ಬೆಂಗಳೂರು ಇದರ ಪತ್ರ ಸಂಖ್ಯೆ:ಯುಬಿಡಿ/ಬಿಎಲ್/5320/15.02.1738. 2003-04 ದಿನಾಂಕ 4.05.2004.
5. ಈ ಕಛೇರಿಯಿಂದ ಬ್ಯಾಂಕಿಗೆ ಬರೆದಿರುವ ಸಮಸಂಖ್ಯೆಯ ಪತ್ರ ದಿನಾಂಕ 5.05.2004.
6. ಕರ್ನಾಟಕ ಕಂಟ್ರಾಕ್ಟರ್ಸ್ ಸಹಕಾರ ಬ್ಯಾಂಕ್ (ನಿ) ಇದರ ಕಾರ್ಯದರ್ಶಿಯವರ ಪತ್ರ ಸಂಖ್ಯೆ ದಿ:19.05.2004.

**ಪ್ರಸ್ತಾವನೆ:**

ಕರ್ನಾಟಕ ಕಂಟ್ರಾಕ್ಟರ್ಸ್ ಸಹಕಾರ ಬ್ಯಾಂಕ್ (ನಿ), ಬೆಂಗಳೂರು ಇದು ಬ್ಯಾಂಕಿಂಗ್ ರೆಗ್ಯೂಲೇಷನ್ ಕಾಯ್ದೆ 1949ರ ಕಲಂ 11(1), 22(3)(ಎ), 22(3)(ಬಿ), 18 ಮತ್ತು 24ನ್ನು ಪಾಲನೆ ಮಾಡುವಲ್ಲಿ ವಿಫಲವಾಗಿದೆ. ಋಣಗಳನ್ನು (debts) ತೀರಿಸಲು ಅಸಮರ್ಥವಾಗಿದೆ. ಈ ಹಿನ್ನೆಲೆಯಲ್ಲಿ ಈ ಬ್ಯಾಂಕನ್ನು ಸಮಾಪನೆಗೊಳಿಸುವುದು ಅಗತ್ಯವೆಂದು ಭಾರತೀಯ ರಿಸರ್ವ್ ಬ್ಯಾಂಕ್ ಉಲ್ಲೇಖ (1)ರ ಪತ್ರದಲ್ಲಿ ತಿಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಎ ರಡಿಯಲ್ಲಿ ಸಮಾಪನೆಗೊಳಿಸಲು ಕೋರಿತ್ತು.

ಅನಂತರ ಕರ್ನಾಟಕ ಕಂಟ್ರಾಕ್ಟರ್ಸ್ ಸಹಕಾರ ಬ್ಯಾಂಕಿನ ಕೋರಿಕೆಯ ಮೇರೆಗೆ ಬ್ಯಾಂಕನ್ನು ಪತ್ತಿನ ಸಹಕಾರ ಸಂಘವೆಂದು ಪರಿವರ್ತಿಸಲು ನಿರಾಕ್ಷೇಪಣಾ ಪತ್ರ ನೀಡಲು ಈ ಕಛೇರಿಯ ಸಮಸಂಖ್ಯೆಯ ಪತ್ರ ದಿನಾಂಕ 9.03.2004ರಲ್ಲಿ ಭಾರತೀಯ ರಿಸರ್ವ್ ಬ್ಯಾಂಕನ್ನು ಕೋರಲಾಗಿತ್ತು.

ಭಾರತೀಯ ರಿಸರ್ವ್ ಬ್ಯಾಂಕ್ ಈ ಕಛೇರಿಯ ಪ್ರಸ್ತಾವನೆಗೆ ಉಲ್ಲೇಖ (4)ರ ಪತ್ರದಲ್ಲಿ ಉತ್ತರ ನೀಡಿ ಹಲವಾರು ಷರತ್ತುಗಳನ್ನು ವಿಧಿಸಿ ಅವುಗಳನ್ನು ಪಾಲನೆ ಮಾಡಿದ ನಂತರ ಮೇಲ್ಕಂಡ ಬ್ಯಾಂಕನ್ನು ಪತ್ತಿನ ಸಹಕಾರ ಸಂಘವೆಂದು ಪರಿವರ್ತಿಸಬಹುದೆಂದು ತಿಳಿಸಿತ್ತು.

ಈ ಷರತ್ತುಗಳನ್ನು ಪಾಲನೆ ಮಾಡಲು ಸಾಧ್ಯವೇ? ಇಲ್ಲವೇ ಎಂಬ ಬಗ್ಗೆ ಉತ್ತರ ನೀಡಲು ಉಲ್ಲೇಖ (5) ರಂತೆ ಪತ್ರವನ್ನು ಕರ್ನಾಟಕ ಕಂಟ್ರಾಕ್ಟರ್ಸ್ ಸಹಕಾರ ಬ್ಯಾಂಕ್‌ಗೆ ಬರೆಯಲಾಗಿತ್ತು.

ಸದರಿ ಬ್ಯಾಂಕಿನ ಕಾರ್ಯದರ್ಶಿಯವರು ದಿನಾಂಕ 12.05.2004 ರಂದು ಈ ಕಛೇರಿಗೆ ಪತ್ರ ಬರೆದು, ಈ ಬಗ್ಗೆ ಉತ್ತರ ನೀಡಲು ದಿನಾಂಕ 11.05.2004 ರಿಂದ 10 ದಿನಗಳ ಕಾಲಾವಕಾಶ ನೀಡಲು ಕೋರಿದ್ದರು. ತರುವಾಯ, ಕರ್ನಾಟಕ ಕಂಟ್ರಾಕ್ಟರ್ಸ್ ಸಹಕಾರ ಬ್ಯಾಂಕಿನ ಕಾರ್ಯದರ್ಶಿಯವರು ಈ ಕಛೇರಿಗೆ ದಿನಾಂಕ 19.05.2004 ರಂದು (ಉಲ್ಲೇಖ-6) ಪತ್ರ ಬರೆದು ವಿವಿಧ ಕಾರಣಗಳಿಂದಾಗಿ ಬ್ಯಾಂಕನ್ನು

ಪತ್ತಿನ ಸಂಘವನ್ನಾಗಿ ಪರಿವರ್ತಿಸಲು ಭಾರತೀಯ ರಿಸರ್ವ್ ಬ್ಯಾಂಕ್ ವಿಧಿಸಿರುವ ಷರತ್ತುಗಳನ್ನು ಪಾಲಿಸಲು ಕಷ್ಟಸಾಧ್ಯವಾಗುತ್ತದೆಂದು ತಿಳಿಸಿ ಈ ಷರತ್ತುಗಳಿಗೆ ವಿನಾಯ್ತಿ ಕೊಡಿಸಿಕೊಡಲು ಆರ್.ಬಿ.ಐ.ಗೆ ಪ್ರಸ್ತಾವನೆ ಸಲ್ಲಿಸಲು ತಮ್ಮ ಪತ್ರದಲ್ಲಿ ಕೋರಿರುತ್ತಾರೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಕಂಟ್ರಾಕ್ಟರ್ಸ್ ಸಹಕಾರ ಬ್ಯಾಂಕ್, ಇದು ಆರ್.ಬಿ.ಐ. ವಿಧಿಸಿರುವ ಷರತ್ತುಗಳನ್ನು ಪಾಲನೆ ಮಾಡಲು ಸಾಧ್ಯವಿಲ್ಲವೆಂಬುದನ್ನು ಗಮನಿಸಬಹುದಾಗಿದೆ.

ಇಂತಹ ಸನ್ನಿವೇಶದಲ್ಲಿ ಭಾರತೀಯ ರಿಸರ್ವ್ ಬ್ಯಾಂಕಿನ ಉಲ್ಲೇಖ (1)ರ ಪತ್ರದ ನಿರ್ದೇಶನದನ್ವಯ ಬ್ಯಾಂಕನ್ನು ಸಮಾಪನೆಗೊಳಿಸುವುದು ಸಮಂಜಸವೆಂಬುದನ್ನು ಮನಗಂಡು ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಆದೇಶ**

**ಸಂಖ್ಯೆ:ಯುಬಿಸಿ/176/ಯುಎಂಸಿ/2003-04 ದಿನಾಂಕ: 2ನೇ ಜೂನ್ 2004**

ಪ್ರಸ್ತಾವನೆಯಲ್ಲಿ ತಿಳಿಸಿರುವ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಕೆ.ಆರ್. ಶಶಿಧರ ಭಾ.ಆ.ಸೇ. ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು, ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72ಎ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಕಂಟ್ರಾಕ್ಟರ್ಸ್ ಸಹಕಾರ ಬ್ಯಾಂಕ್ (ನಿ), ಬೆಂಗಳೂರು ಇದನ್ನು ಸಮಾಪನೆಗೊಳಿಸಿ ಸಮಾಪಕರನ್ನಾಗಿ ಶ್ರೀ ಎನ್.ಎಂ. ಪಾಟೀಲ್, ಸಹಕಾರ ಸಂಘಗಳ ಜಂಟಿ ನಿಬಂಧಕರು (ಕಾನೂನು ಕೋಶ), ಇವರನ್ನು ಹೆಚ್ಚುವರಿ ಪ್ರಭಾರದಲ್ಲಿ ನೇಮಿಸಿರುತ್ತೇನೆ.

ಸಮಾಪಕರು ಕೂಡಲೇ ಪ್ರಭಾರ ವಹಿಸಿಕೊಂಡು ಈ ಕಛೇರಿಗೆ ವರದಿ ಮಾಡುವುದು.

ಸಮಾಪಕರು, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ನಿಯಮ ಮತ್ತು ಈ ಕಛೇರಿಯ ನಿರ್ದೇಶನ/ಸುತ್ತೋಲೆಗಳಿಗನುಸಾರವಾಗಿ ಬ್ಯಾಂಕಿನ ಆಸ್ತಿ-ಜವಾಬ್ದಾರಿಗಳ ವಿಲೇವಾರಿಗೆ ಕ್ರಮ ತೆಗೆದುಕೊಳ್ಳತಕ್ಕದ್ದು.

1. ಈ ಆದೇಶವನ್ನು ದಿನಾಂಕ 02-06-2004 ರಂದು ನನ್ನ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ಹೊರಡಿಸಲಾಗಿದೆ.

**ಕೆ.ಆರ್. ಶಶಿಧರ**

ಪಿ.ಆರ್. 867 ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು.

**ಸಹಕಾರ ಇಲಾಖೆ**

**ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ-ನಿಬಂಧಕರ ಕಚೇರಿ, ಶಿವಮೊಗ್ಗ**

**ವಿಷಯ:** ಸಮಾಪನಾ ಆದೇಶಿತ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ, ಬಿಳಕಿ ಭದ್ರಾವತಿ ತಾಲ್ಲೂಕ್, ಇದರ ನೊಂದಣಿ ರದ್ಧತಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿಯ ಆದೇಶ ನಂ. ಡಿಆರ್ಎಸ್:ಕಾನೂನು 3: ಡಿಎಲ್ಎಸ್:45:02-03:ದಿನಾಂಕ: 15-11-2002.

2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಪತ್ರ ನಂ. ಎಆರ್-24:ಸಮಾಪನೆ:ನೊಂದಣಿ ರದ್ಧತಿ:45:04-05: ದಿನಾಂಕ:25-5-2004.

ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ, ಬಿಳಕಿ, ಭದ್ರಾವತಿ ತಾಲ್ಲೂಕ್ ಈ ಸಂಘವು ಶಿವಮೊಗ್ಗ ಉಪ-ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ, ರವರ ಕಾರ್ಯಾಲಯದ ನೊಂದಣಿ ಸಂಖ್ಯೆ:ಎಆರ್ಎಸ್:24:ಆರ್‌ಜಿಎನ್: 22296:99-2000:ದಿನಾಂಕ:29-11-99 ರಲ್ಲಿ ನೊಂದಾಯಿಸಲ್ಪಟ್ಟಿದ್ದು, ಕಾರ್ಯವ್ಯಾಪ್ತಿಯು ಬಿಳಕಿ ಗ್ರಾಮಕ್ಕೆ ಸೀಮಿತವಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದರಿಂದ, ಉಲ್ಲೇಖ (1)ರಲ್ಲಿಯ ಆದೇಶದಲ್ಲಿ ಸಮಾಪನೆಗೆ ಆದೇಶಿಸಿದ್ದು, ಶಿವಮೊಗ್ಗ ಹಾಲು ಒಕ್ಕೂಟದ ಮಾರ್ಗಾಧಿಕಾರಿಯವರನ್ನು ಸಮಾಪನಾಧಿಕಾರಿಯಾಗಿ ನೇಮಕಗೊಳಿಸಿದೆ. ಸಮಾಪನಾಧಿಕಾರಿಯವರು ದಿನಾಂಕ 27-10-2002 ರಂದು ಪ್ರಭಾರ ವಹಿಸಿಕೊಂಡು ಈ ಸಂಘದ ಆಸ್ತಿ ಜವಾಬ್ದಾರಿ ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿಯ ಚರಾಸ್ತಿ ಹಾಗೂ ಹಾಲಿನ ಉಪಕರಣಗಳನ್ನು ಇಲಾಖೆಯ ಅನುಮತಿ ಪಡೆದು ಸೀಲ್ ಮಾಡಿರುತ್ತಾರೆ. ಈ ಸಂಘದಲ್ಲಿ ಸರ್ಕಾರದ ಷೇರು ಹಾಗೂ ಸಾಲ ಯಾವುದೂ ಇರುವುದಿಲ್ಲ ಹಾಗೂ ಸ್ಥಿರಾಸ್ತಿ ಇರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಈ ಸಂಘದ ಆಸ್ತಿಯಲ್ಲಿ ಉಳಿದ ರೂ.1000-00 ಗಳನ್ನು ಚಲನ್ ನಂ.60 ದಿನಾಂಕ 24-5-2004 ರಂದು ಸಹಕಾರ ಅಭಿವೃದ್ಧಿ ಟ್ರಸ್ಟ್‌ಗೆ ಪಾವತಿ ಮಾಡಿರುವುದಾಗಿ ವರದಿ ಮಾಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಉಲ್ಲೇಖ (2)ರಲ್ಲಿಯ ಪತ್ರದಲ್ಲಿ ನೊಂದಣಿ ರದ್ಧತಿಗಾಗಿ ಶಿಫಾರಸ್ ಮಾಡಿರುತ್ತಾರೆ.

ಶಿವಮೊಗ್ಗ ಉಪ-ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ, ರವರ ಉಲ್ಲೇಖ (1)ರಲ್ಲಿಯ ಶಿಫಾರಸ್ ಅನ್ವಯ, ಸರ್ಕಾರದ ವಿನಿಯೋಗಗಳು ಇಲ್ಲದ ಪ್ರಯುಕ್ತ ಹಾಗೂ ಆಸ್ತಿ ಜವಾಬ್ದಾರಿ ಶೂನ್ಯವಾಗಿರುವ ಕಾರಣ, ಈ ಸಂಘದ ಅಸ್ತಿತ್ವದಿಂದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ ಪ್ರಯೋಜನವಿಲ್ಲವೆಂದು ಮನಗಂಡು, ಸಂಘದ ನೊಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಾಣಿಸಿದಂತೆ ಆದೇಶಿಸಲಾಗಿದೆ.

**ಆದೇಶ**

**ನಂ. ಡಿಆರ್ಎಸ್:ಸಮಾಪನೆ:45:ಡಿಎಲ್ಎಸ್:02-03, ದಿನಾಂಕ: 31ನೇ ಮೇ 2004**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ.ಸಿಎಂಡಬ್ಲ್ಯೂ:69: ಸಿಎಲ್ಎಂ:200: ದಿನಾಂಕ: 21-11-2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ, ಆದ ನಾನು ಹಾಲು ಉತ್ಪಾದಕರ ಸಹಕಾರ ಸಂಘ ನಿ:ಬಿಳಕಿ, ಭದ್ರಾವತಿ ತಾಲ್ಲೂಕ್, ಇದರ ನೊಂದಣಿ ನಂ. ಎಆರ್ಎಸ್:24:ಆರ್‌ಜಿಎನ್:22296:99-2000 ದಿನಾಂಕ 29-11-1999ನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ವಿಸರ್ಜಿಸಲ್ಪಟ್ಟಿದೆ ಎಂದು, ಸಂಘವು ಅಸ್ತಿತ್ವದಲ್ಲಿಲ್ಲವೆಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳವರೆಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ,ರವರ ಕಚೇರಿಯಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವು ಈ ದಿನ ದಿನಾಂಕ 31ನೇ ಮೇ 2004 ರಂದು ಸ್ವಸಹಿ ಹಾಗೂ ಕಚೇರಿ ಮುದ್ರೆಯೊಂದಿಗೆ ಹೊರಡಿಸಲಾಗಿದೆ.

**ಕೆ. ಈಶ್ವರಸ್ವಾಮಿ**

ಪಿ.ಆರ್. 868 ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೊಡಗು, ಮಡಿಕೇರಿ

## ಅಧಿಕೃತ ಜ್ಞಾಪನ ಪತ್ರ

### ಸಂಖ್ಯೆ:ಇ.ಎಸ್.ಟಿ(1)/10/2004-05, ದಿನಾಂಕ: 14ನೇ ಜೂನ್ 2004

**ವಿಷಯ:** ಗುತ್ತಿಗೆ ಆಧಾರದಲ್ಲಿ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳನ್ನು ನೇಮಕಾತಿ ಮಾಡುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಆದೇಶ ಸಂಖ್ಯೆ:ಆ.ಕು.ಕ./977/ಹೆಚ್.ಎಸ್.ಹೆಚ್/2001/ದಿನಾಂಕ: 02-11-2002.
2. ಈ ಕಛೇರಿ ಪತ್ರಿಕಾ ಪ್ರಕಟಣೆ ಪತ್ರ ಸಮ ಸಂಖ್ಯೆ ದಿನಾಂಕ 10-05-04.
3. ಸರ್ಕಾರದ ಆದೇಶ ಸಂಖ್ಯೆ: ಆ.ಕು.ಕ/504/ಹೆಚ್.ಎಸ್.ಹೆಚ್/97 ಬೆಂಗಳೂರು ದಿನಾಂಕ: 17-10-97.
4. ಸರ್ಕಾರದ ಪತ್ರ ಸಂಖ್ಯೆ ಆಕುಕ /607/HSH/2003 ದಿನಾಂಕ 13-02-2004.

ಉಲ್ಲೇಖ (4)ರ ಸರ್ಕಾರದ ಆದೇಶದಂತೆ ಗ್ರಾಮಾಂತರ ಪ್ರದೇಶಗಳಲ್ಲಿ ಇರುವ ಪ್ರಾ.ಆ.ಕೇಂದ್ರಗಳಲ್ಲಿ ಖಾಲಿ ಇರುವ ಸಾಮಾನ್ಯ ಕರ್ತವ್ಯ ವೈದ್ಯರ ಹುದ್ದೆಗಳನ್ನು ಒಂದು ವರ್ಷದ ಅವಧಿಗೆ/ ಮುಂದಿನ ಆದೇಶದವರೆಗೆ/ ನೇರ ನೇಮಕಾತಿಯಿಂದ ತುಂಬುವವರೆಗೆ/ ವರ್ಗಾವಣೆಯಿಂದ ತುಂಬುವವರೆಗೆ ಇದರಲ್ಲಿ ಯಾವುದು ಮೊದಲೊ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಗುತ್ತಿಗೆ ಆಧಾರದ ಮೇಲೆ ಮಾಸಿಕ ವೇತನ ರೂ.7400.00 (ರೂಪಾಯಿ ಏಳುಸಾವಿರದ ನಾನ್ನೂರು ಮಾತ್ರ) ರಂತೆ ತುಂಬಲು ಅವಕಾಶವಿರುತ್ತದೆ. ಅದರಂತೆ ಉಲ್ಲೇಖ (2)ರ ಪ್ರಕಾರ ಕಛೇರಿಯಿಂದ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಕರೆಯಲಾಗಿತ್ತು. ಅದರಂತೆ ಸರ್ಕಾರದ ಆದೇಶ ಸಂಖ್ಯೆ: ಸಿ.ಆ.ಸು.ಇ/108/ ಸಹಿ ಮಾ/95 ದಿನಾಂಕ: 20-05-1995ರ ಮೀಸಲಾತಿಯನ್ನು ಪರಿಗಣಿಸಿ ಉಲ್ಲೇಖ (3)ರ ಸರ್ಕಾರಿ ಆದೇಶದ ಅನುಬಂಧ (1)ರಲ್ಲಿನ ನಿಬಂಧನೆ ಮತ್ತು ಷರತ್ತಿಗೊಳಪಟ್ಟು ಹಾಗೂ ಸರ್ಕಾರವೂ ಆಗಿಂದಾಗ್ಗೆ ಹೊರಡಿಸುವ ನಿಯಮಗಳಿಗೆ ಒಳಪಟ್ಟು ನೇಮಕಾತಿಯನ್ನು ಅವರುಗಳ ಹೆಸರಿನ ಮುಂದೆ ನಮೂದಿಸಿರುವ ಸಂಸ್ಥೆಗಳಿಗೆ ನೇಮಕ ಮಾಡಲಾಗಿದೆ.

| ಕ್ರ. ಸಂ. | ಹೆಸರು ಮತ್ತು ವಿಳಾಸ | ವರ್ಗ | ನೇಮಕ ಮಾಡಿದ ಸ್ಥಳ |
|---|---|---|---|
| 1. | ಡಾ॥ ನಂದೀಪ್ ಹೆಚ್. ತಂದೆ: ಎನ್. ಹನುಮಂತಯ್ಯ 43/ಬಿಈ ಮತ್ತು ಎಫ್ ಬ್ಲಾಕ್, 2ನೇ ಎ ಕ್ರಾಸ್, ಡಿವಿಸಿ ಲೇಔಟ್, ರಾಮಕೃಷ್ಣನಗರ, ಮೈಸೂರು-23. | 3 ಎ | ಪ್ರಾ.ಆ. ಘಟಕ ನಂಜರಾಯಪಟ್ಟಣ |
| 2. | ಡಾ॥ ಜಗದೀಶ್ವರ ಶಿವರಾಮ್ ಆರ್.ಈ. ತಂದೆ: ಶಿವರಾಮಪ್ಪ, ನಂ.1938, 2ನೇ ಮುಖ್ಯರಸ್ತೆ, 12ನೇ ಕ್ರಾಸ್, ಆರ್.ಪಿ.ಸಿ. ಬಡಾವಣೆ, ಬೆಂಗಳೂರು-40. | ಸಾಮಾನ್ಯ ವರ್ಗ | ಪ್ರಾ.ಆ. ಕೇಂದ್ರ, ಸುಂಟಿಕೊಪ್ಪ |
| 3. | ಡಾ॥ ರಘುನಾಥ ಸಿ.ಎಸ್. ತಂದೆ: ಎಸ್.ವಿ. ಸತ್ಯನಾರಾಯಣ C/o ಚಂದ್ರಶೇಖರ, ಕೋಟಿ ಮಾರಿಗುಡಿ ರಸ್ತೆ, ಚೆನ್ನರಾಯಪಟ್ಟಣ, ಹಾಸನ-573 116 | ಸಾಮಾನ್ಯ ವರ್ಗ | ಪ್ರಾ.ಆ.ಕೇಂದ್ರ, ಆಲೂರು ಸಿದ್ದಾಪುರ |

1. ಮೇಲೆ ನಮೂದಿಸಿದ ವೈದ್ಯರು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು, ಮಡಿಕೇರಿ ಇವರಲ್ಲಿ ಜ್ಞಾಪನ ಪತ್ರ ತಲುಪಿದ 7 ದಿವಸದ ಒಳಗೆ ಕರ್ತವ್ಯಕ್ಕೆ ಹಾಜರಾಗತಕ್ಕದು ತಪ್ಪಿದಲ್ಲಿ ಈ ನೇಮಕಾತಿ ಆದೇಶವೂ ತಾನಾಗಿಯೇ ರದ್ದಾಗುತ್ತದೆ.
2. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು ಕರ್ತವ್ಯಕ್ಕೆ ತೆಗೆದುಕೊಳ್ಳುವ ಮುನ್ನ ಅವರ ಮೂಲ ಜನನ ಪ್ರಮಾಣ ಪತ್ರ/ಜಾತಿ ಪ್ರಮಾಣ ಪತ್ರ ಹಾಗೂ ಇನ್ನಿತರ ದಾಖಲಾತಿಗಳನ್ನು ಪರಿಶೀಲಿಸಿ ಸರಿಯಾಗಿದೆಯೇ ಎಂದು ಖಚಿತಪಡಿಸಿಕೊಂಡು ಕರ್ತವ್ಯಕ್ಕೆ ತೆಗೆದುಕೊಳ್ಳಲು ಸೂಚಿಸಿದೆ. ಮೂಲ ದಾಖಲಾತಿಗಳಲ್ಲಿ ವ್ಯತ್ಯಾಸ ಕಂಡು ಬಂದಲ್ಲಿ ನೇಮಕಾತಿ ಆದೇಶವನ್ನು ರದ್ದುಪಡಿಸಲಾಗುವುದು.
3. ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ಅಭ್ಯರ್ಥಿಗಳು ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ನಡತೆ ಪ್ರಮಾಣ ಪತ್ರ ಮತ್ತು ಸರ್ಕಾರದ ಆದೇಶದಂತೆ ಹೇಳಿರುವ ನಿಬಂಧನೆ ಮತ್ತು ಷರತ್ತುಗಳನ್ನು ಒಪ್ಪಿಕೊಂಡಿರುವ ಬಗ್ಗೆ ರೂ.50.00 (ರೂ. ಐವತ್ತು ಮಾತ್ರ) ಛಾಪಾ ಕಾಗದದ ಮೇಲೆ ಮುಚ್ಚಳಿಕೆಯನ್ನು ಸಕ್ಷಮ ಪ್ರಾಧಿಕಾರದಿಂದ ಪ್ರಮಾಣೀಕರಿಸಿ ಸಲ್ಲಿಸತಕ್ಕದ್ದು.
4. ಕೇಂದ್ರ ಸ್ಥಾನದಲ್ಲಿ ವಾಸವಿರುವುದಾಗಿ ಮುಚ್ಚಳಿಕೆ ಬರೆದು ಕೊಡತಕ್ಕದ್ದು.
5. ಯಾವುದೇ ಕಾರಣಕ್ಕೂ ನೇಮಕಾತಿ ಮಾಡಿದ ಸ್ಥಳವನ್ನು ಬದಲಾಯಿಸಲೂ ಬರುವುದಿಲ್ಲ ಮತ್ತು ವರ್ಗಾವಣೆಗೆ ಅವಕಾಶವಿರುವುದಿಲ್ಲ.

ಪಿ.ಆರ್. 869 ಜಿಲ್ಲಾಧಿಕಾರಿಗಳು, ಕೊಡಗು, ಮಡಿಕೇರಿ.

**ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**

**ಅಬಕಾರಿ ಉಪ ನಿರೀಕ್ಷಕರು 2, ಚಿಕ್ಕಮಗಳೂರು ಉಪ ವಿಭಾಗ ಇವರ ಪ್ರವವ ಸಂಖ್ಯೆ 18/2003-04, ದಿನಾಂಕ: 25ನೇ ಸೆಪ್ಟೆಂಬರ್ 2003**

| | | |
|---|---|---|
| **ಉಪಸ್ಥಿತರು** | : | ಶ್ರೀ ಕೆ. ಭೀಮಪ್ಪ,<br>ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ)<br>ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು. |
| **ಫಿರ್ಯಾದುದಾರರು** | : | ಅಬಕಾರಿ ಉಪ ನಿರೀಕ್ಷಕರು 2 ಚಿಕ್ಕಮಗಳೂರು ಉಪ ವಿಭಾಗ |
| **ಆಪಾದಿತರು** | : | ಸಿ.ಎಸ್. ಗಣೇಶ ಬಿನ್ ಸಿದ್ದಯ್ಯ |

**ಪ್ರಕರಣದ ಮುಖ್ಯಾಂಶಗಳು**

ದಿನಾಂಕ: 25-9-2003 ರಂದು ಅಬಕಾರಿ ಉಪ ನಿರೀಕ್ಷಕರು 2, ಚಿಕ್ಕಮಗಳೂರು ಉಪ ವಿಭಾಗ, ಇವರು ಟಿ ವಿ ಎಸ್ ಚಾಂಪ್ ಸಂಖ್ಯೆ. ಕೆ.ಎ. 18 ಇ. 6904 ಅನ್ನು ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆ ಸಂಬಂಧದಲ್ಲಿ ಅನುಮಾನಗೊಂಡು ತಡೆದು ನಿಲ್ಲಿಸಿ ವಾಹನವನ್ನು ತಪಾಸಣೆ ಮಾಡಲಾಗಿ ವಾಹನದಲ್ಲಿ ಒಟ್ಟು 10,000 ಲೀಟರ್ ಕಳ್ಳಭಟ್ಟಿ ಸಾರಾಯಿ ಇದ್ದು, ಸದರಿ ಕಳ್ಳ ಭಟ್ಟಿ ಸಾರಾಯಿ ಸಾಗಾಣಿಕೆಗೆ ಸಂಬಂಧಿಸಿದಂತೆ ವಾಹನದಲ್ಲಿದ್ದ ವ್ಯಕ್ತಿ ಎಸ್. ಗಣೇಶ ಬಿನ್ ಸಿದ್ದಯ್ಯ ಇವರು ಸಂಬಂಧಪಟ್ಟ ದಾಖಲಾತಿಗಳನ್ನು ಹಾಜರುಪಡಿಸದೇ ಇದ್ದುದರಿಂದ, ಈ ಬಗ್ಗೆ ಸ್ಥಳದಲ್ಲಿ ಪಂಚರ ಸಮಕ್ಷಮ ಜರುಗಿಸಬೇಕಾದ ಕ್ರಮಗಳನ್ನು ಅನುಸರಿಸಿ ದೊರೆತ ಕಳ್ಳ ಭಟ್ಟಿ ಸಾರಾಯಿಯನ್ನು ವಾಹನದೊಂದಿಗೆ ಸರ್ಕಾರದ ವಶಕ್ಕೆ ಅಮಾನತ್ತು ಪಡಿಸಿಕೊಂಡು ಪ್ರ.ವ.ವ. ಸಂಖ್ಯೆ.18/2003-04 ರಲ್ಲಿ ಮೊಕದ್ದಮೆಯನ್ನು ದಾಖಲಿಸಿ ಮುಂದಿನ ತನಿಖೆಗಾಗಿ ಅಬಕಾರಿ ಉಪ ನಿರೀಕ್ಷಕರು, ಚಿಕ್ಕಮಗಳೂರು ಉಪ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ಕಳ್ಳಭಟ್ಟಿ ಸಾರಾಯಿಗೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡುವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಕೋರಿ ಪತ್ರ ಬರೆದು ಮುಟ್ಟುಗೋಲಿನ ನಡುವಳಿಗಳನ್ನು ಮುಂದುವರೆಸಲಾಯಿತು.

ಚಿಕ್ಕಮಗಳೂರು ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿಯ ಮೋಟಾರು ವಾಹನ ನಿರೀಕ್ಷಕರು, ಇವರು ವಾಹನಕ್ಕೆ ರೂ.3,000/- ಗಳನ್ನು ಮಾತ್ರ ಬೆಲೆ ನಿಗದಿಪಡಿಸಿರುತ್ತಾರೆ.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರು ಇವರಿಂದ ಪಡೆಯಲಾದ ಬಿ. ಎಕ್ಸ್ಟ್ರ್ಯಾಕ್ಟ್ ಆಧಾರದ ಮೇಲೆ ವಾಹನದ ಮಾಲೀಕರಾದ ಶ್ರೀ ಬಿ.ವಿ. ಚಲಪತಿ ಬಿನ್ ಬಿ. ಗೋವಿಂದಾಸ್ ಶೆಟ್ಟಿ, ಸುಷ್ಮ ಎಂಟರ್ ಪ್ರೈಸಸ್, ಖಾದರ್ ಕಾಂಪ್ಲೆಕ್ಸ್, ಎಂ.ಜಿ. ರಸ್ತೆ, ಚಿಕ್ಕಮಗಳೂರು, ಇವರಿಗೆ ಕಲಂ. 43 (ಬಿ) ಅಡಿಯಲ್ಲಿ ನೋಟೀಸ್ ಅನ್ನು ನೊಂದಾಯಿತ ಅಂಚೆ ಮೂಲಕ ರವಾನಿಸಲು ಕ್ರಮ ಕೈಗೊಂಡಿದ್ದು, ದಿನಾಂಕ:24.11.2003 ರಂದು ನೋಟೀಸ್ "ನಾಟ್ ಕ್ಲೈಮ್ಡ್" ಷರಾದೊಂದಿಗೆ ಈ ಪ್ರಾಧಿಕಾರಕ್ಕೆ ಮರಳಿ ಬಂದಿರುತ್ತದೆ.

ಸದರಿ ವಾಹನದ ಮಾಲೀಕರಿಗೆ ಮತ್ತೊಮ್ಮೆ ನೋಟೀಸ್ ಅನ್ನು ಅಬಕಾರಿ ನಿರೀಕ್ಷಕರು, ಚಿಕ್ಕಮಗಳೂರು ವಲಯ ಇವರು ದಿನಾಂಕ: 2.1.2004 ರಂದು ವಾಹನದ ಮಾಲೀಕರಿಗೆ ಖುದ್ದು ಜಾರಿ ಮಾಡಿ ಸ್ವೀಕೃತಿಯೊಂದಿಗೆ ಪ್ರಾಧಿಕಾರಕ್ಕೆ ದಿನಾಂಕ: 5.1.2004 ರಂದು ಸಲ್ಲಿಸಿರುತ್ತಾರೆ.

ಸದರಿ ಪ್ರಕರಣದಲ್ಲಿ ವಾಹನದ ಮಾಲೀಕರಿಗೆ ನೋಟೀಸ್ ಜಾರಿಯಾಗಿದ್ದು, ಈವರೆವಿಗೂ ಸಹಾ ಪ್ರಾಧಿಕಾರದ ಮುಂದೆ ಬಂದು ಲಿಖಿತ ಸಮಜಾಯಿಷಿ ಸಲ್ಲಿಸಿರುವುದಿಲ್ಲ. ವಶಪಡಿಸಿಕೊಂಡ ವಾಹನದ ಮುಟ್ಟುಗೋಲಿನ ನಡುವಳಿಗಳು ಪೂರ್ಣಗೊಂಡಿದ್ದು, ಜಪ್ತಾಗಿರುವ ವಾಹನಕ್ಕೆ ಇದುವರೆವಿಗೂ ಪ್ರಾಧಿಕಾರದ ಮುಂದೆ ವಾಹನದ ಮಾಲೀಕರು ಬಂದು ಹಕ್ಕು ಸಾಧಿಸದೇ ಇರುವುದರಿಂದ ಸದರಿಯವರಿಗೆ ವಾಹನದ ಮೇಲೆ ಆಸಕ್ತಿ ಇಲ್ಲವೆಂದು ಪರಿಗಣಿಸಲಾಗಿರುತ್ತದೆ. ವಾಹನವು ಇಲಾಖೆಯ ವಶದಲ್ಲಿದ್ದು, ತಟಸ್ಥ ಸ್ಥಿತಿಯಲ್ಲಿ ಹಾಗೆಯೇ ಬಿಟ್ಟಲ್ಲಿ ಪ್ರಕೃತಿಯ ವೈಪರೀತ್ಯಗಳಿಗನುಗುಣವಾಗಿ ಸರ್ಕಾರಕ್ಕೆ ಬರಬಹುದಾದ ರಾಜಸ್ವಕ್ಕೆ ಧಕ್ಕೆ ಉಂಟಾಗುವ ಸಂಭವವಿರುವುದರಿಂದ ಮೊಕದ್ದಮೆಯ ಶೀಘ್ರ ವಿಲೇವಾರಿಯ ದೃಷ್ಟಿ, ಸರ್ಕಾರದ ಆದಾಯದ ದೃಷ್ಟಿಯಿಂದ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ. 43(ಸಿ) ಅಡಿಯಲ್ಲಿ ವಶಪಡಿಸಿಕೊಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

**ಡಿ.ಟಿ.ಸಿ.ಆರ್. ಸಂಖ್ಯೆ. 162/2003-04, ದಿನಾಂಕ: 8ನೇ ಜೂನ್ 2004**

ಶ್ರೀ ಕೆ. ಭೀಮಪ್ಪ, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮಿಷನರ್ ಆಫ್ ಎಕ್ಸೈಜ್, (ಪ್ರಭಾರ), ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು. ಆದ ನಾನು, ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ.43(ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ. 43 (ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಸಂಖ್ಯೆ. ಕೆ ಎ.18ಇ. 6904 (ಟಿ ವಿ ಎಸ್ ಚಾಂಪ್) ಅನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ. 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಸದರಿ ಪ್ರಕರಣದಲ್ಲಿರುವ ಆರೋಪಿಯ ವಿರುದ್ಧ ನ್ಯಾಯಾಲಯಕ್ಕೆ ಆರೋಪ ಪಟ್ಟಿ ಸಲ್ಲಿಸಿ, ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸುವಂತೆ ಅಬಕಾರಿ ಉಪ ನಿರೀಕ್ಷಕರು, ಚಿಕ್ಕಮಗಳೂರು ಉಪ ವಲಯ ಇವರಿಗೆ ಆದೇಶಿಸಿದೆ.

ಈ ಆದೇಶವನ್ನು ಇಂದು ಅಂದರೆ 8ನೇ ಜೂನ್ 2004 ರಂದು ಬೆರಳಚ್ಚು ಗಾರರಿಗೆ ಉಖ್ತಲೇಖನ ಕೊಟ್ಟು ಗಣಕ ಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಗಿತ್ತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿರುತ್ತದೆ.

ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ)

ಪಿ.ಆರ್. 870 ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ನಡವಳಿಗಳು, ಬೆಂಗಳೂರು

**ವಿಷಯ:** ಶ್ರೀ ಬಿ.ಸಿ. ಪಾಟೀಲ, ಫಾರ್ಮಾಸಿಸ್ಟ್, ಪ್ರಾ.ಆ.ಕೇಂದ್ರ, ತುರುವಿಹಾಳ, ರಾಯಚೂರು ಜಿಲ್ಲೆ, ಇವರ ಕರ್ತವ್ಯ ಲೋಪ ಮತ್ತು ಅಸಭ್ಯ ವರ್ತನೆ ಆರೋಪದ ಬಗ್ಗೆ ಇಲಾಖೆ ವಿಚಾರಣೆ ಅಂತಿಮ ಆದೇಶ.

**ಉಲ್ಲೇಖ:**
1. ನಿರ್ದೇಶನಾಲಯದ ಅಮಾನತ್ತಿನ ಆದೇಶ ಸಂ:ಡಿಪಿಎನ್18:ಸಿಆರ್:38:01-02, ದಿನಾಂಕ:28-1-2001ನ್ನು ವಿಖಂಡನೆಗೊಳಿಸಿದ ಆದೇಶ ದಿನಾಂಕ:13-8-2002.
2. ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆ ಪತ್ರದ ಸಂ:ಡಿಪಿಎನ್:18:ಸಿಆರ್:38:01-02, ದಿನಾಂಕ: 3-7-2002.
3. ನೌಕರರ ಲಿಖಿತ ಅಹವಾಲು ಪತ್ರದ ದಿನಾಂಕ:12-8-2002.
4. ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂ:ಡಿಪಿಎನ್:18:ಸಿಆರ್-38:01-02, ದಿನಾಂಕ:17-10-2002.
5. ವಿಚಾರಣೆ ವರದಿಯ ಸಂ:ವಿಅ:ವಿಚಾರಣೆ:ಎನ್‌ಜಿ:129:01-02, ದಿನಾಂಕ:2-1-2004.
6. ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿದ ಸೂಚನಾ ಪತ್ರದ ಸಂ:ಡಿಪಿಎನ್:18:ಸಿಆರ್:38:01-02, ದಿ:20-2-2004.
7. ನೌಕರರ ಲಿಖಿತ ಅಹವಾಲು ಪತ್ರದ ದಿ:26-2-2004.

**ಪ್ರಸ್ತಾವನೆ:**

ಶ್ರೀ ಬಿ.ಸಿ. ಪಾಟೀಲ, ಫಾರ್ಮಾಸಿಸ್ಟ್, ಇವರು ಈ ಹಿಂದೆ ಪ್ರಾಥಮಿಕ ಆರೋಗ್ಯ ಕೇಂದ್ರ, ಕವಲೂರು, ಕೊಪ್ಪಳ ಜಿಲ್ಲೆ, ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ವಿನಾಕಾರಣ ತಮ್ಮ ಮೇಲಾಧಿಕಾರಿಗಳ ವಿರುದ್ಧ ಸುಳ್ಳು ಆಪಾದನೆಗಳನ್ನು ಮತ್ತು ಬೇಜವಾಬ್ದಾರಿಯುತ ಆರೋಪಗಳನ್ನು ಮಾಡುವುದು ಅಲ್ಲದೇ ಇಲಾಖೆಯ ಅತ್ಯಂತ ಹಿರಿಯ ಅಧಿಕಾರಿಗಳ ವಿರುದ್ಧ ಸುಳ್ಳು ಮತ್ತು ಬೇಜವಾಬ್ದಾರಿಯುತ ಆಪಾದನೆಗಳ ಮೇಲೆ ಅರ್ಜಿಯನ್ನು ಬರೆಯುವ ಕಾರಣ ಮೇಲೆ ಓದಲಾದ (1)ರ ಆದೇಶದಲ್ಲಿ ಅವರನ್ನು ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು. ತದನಂತರ ಮೇಲೆ ಓದಲಾದ (2)ರಲ್ಲಿನ ಪತ್ರದಲ್ಲಿ ತಿಳುವಳಿಕೆ ಮತ್ತು ದೋಷಾರೋಪಣೆ ಪಟ್ಟಿಯನ್ನು ಜಾರಿಗೊಳಿದ್ದು ಇದಕ್ಕೆ ಅನುಗುಣವಾಗಿ ನೌಕರರು ಮೇಲೆ ಓದಲಾದ (3)ರಲ್ಲಿನ ಪತ್ರದಲ್ಲಿ ತನ್ನ ಲಿಖಿತ ಅಹವಾಲನ್ನು ಸಲ್ಲಿಸಿದಂತೆ ಪರಿಶೀಲಿಸಲಾಗಿ, ಅದು ಸಮರ್ಪಕವಾಗಿರದ ಕಾರಣ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ (4) ರಲ್ಲಿನ ಆದೇಶದಲ್ಲಿ ಮುಖ್ಯ ಜಾಗೃತಾಧಿಕಾರಿಗಳು, ಜಾಗೃತಕೋಶ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವಾ ನಿರ್ದೇಶನಾಲಯ, ಬೆಂಗಳೂರು ಇವರನ್ನು ವಿಚಾರಣೆ ಅಧಿಕಾರಿಯನ್ನಾಗಿ ನೇಮಿಸಿದಂತೆ ರೀತ್ಯಾ ಮೇಲೆ ಓದಲಾದ (5)ರಲ್ಲಿನ ಆದೇಶದಂತೆ ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿದಂತೆ ಮೇಲೆ ಓದಲಾದ (6)ರಲ್ಲಿನ ಸೂಚನಾ ಪತ್ರದಲ್ಲಿ ವರದಿಯ ಪ್ರತಿಯನ್ನು ಆಪಾದಿತ ನೌಕರರಿಗೆ ಜಾರಿಗೊಳಿಸಿದ್ದಕ್ಕನುಗುಣವಾಗಿ ಮೇಲೆ ಓದಲಾದ (7)ರಲ್ಲಿ ಆಪಾದಿತ ನೌಕರರು ತನ್ನ ಲಿಖಿತ ಅಹವಾಲನ್ನು ಸಲ್ಲಿಸಿರುತ್ತಾರೆ.

ವಿಚಾರಣಾಧಿಕಾರಿಗಳು ತಮ್ಮ ವರದಿಯ ನಿರ್ಣಯದಲ್ಲಿ "ಶ್ರೀ ಬಿ.ಸಿ. ಪಾಟೀಲ, ಫಾರ್ಮಾಸಿಸ್ಟ್, ಸುಮಾರು 15 ವರ್ಷಗಳಿಂದ ತನ್ನ ನಿಯಂತ್ರಣಾಧಿಕಾರಿಗಳು ಹಾಗೂ ಇತರೆ ಸಿಬ್ಬಂದಿಯವರು, ತಮ್ಮ ಇಲಾಖೆಯ ನಿರ್ದೇಶಕರು ಸೇರಿದಂತೆ ಎಲ್ಲಾ ಹಿರಿಯ ಅಧಿಕಾರಿಗಳು, ಕಾರ್ಯದರ್ಶಿಗಳು, ಜಿಲ್ಲೆಯ ಅಂದಿನ ಜಿಲ್ಲಾಧಿಕಾರಿಗಳು ಹಾಗೂ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳ ವಿರುದ್ಧ ದೂರು ಸಲ್ಲಿಸುವುದನ್ನು ಒಂದು ಹವ್ಯಾಸವನ್ನಾಗಿ ಬೆಳೆಸಿಕೊಂಡಿರುತ್ತಾರೆ. ಅನೇಕ ದೂರು ಅರ್ಜಿಗಳನ್ನು ತಂತಿ ಸಂದೇಶಗಳನ್ನು ಕಳುಹಿಸಿ ಕಲುಷಿತ ವಾತಾವರಣ ಉಂಟುಮಾಡಿ ಮೇಲಾಧಿಕಾರಿಗಳಿಗೆ ಹಾಗೂ ನಿಯಂತ್ರಣ ವೈದ್ಯಾಧಿಕಾರಿಗಳಿಗೆ ಮಾನಸಿಕ ತೊಂದರೆ ಉಂಟುಮಾಡುವ ಪ್ರವೃತ್ತಿ ಹೊಂದಿರುವ ಕಾರಣ ಇವರನ್ನು ರಾಯಚೂರು ಜಿಲ್ಲೆಯಿಂದ ಅಮಾನತ್ತುಗೊಳಿಸಿ ತದ ನಂತರ ಕೊಪ್ಪಳ ಜಿಲ್ಲೆಯ, ಪ್ರಾಥಮಿಕ ಆರೋಗ್ಯ ಕೇಂದ್ರ, ಹಿಟ್ನಳ್ ನಂತರ ಈ ತುರುವಿಹಾಳ್ ರಾಯಚೂರು ಜಿಲ್ಲೆ, ಇಲ್ಲಿ ಪುನರ್ ನೇಮಿಸಿದ ನಂತರವೂ ಇವರ ಮೇಲಿನ ಅಧಿಕಾರಿಗಳೊಂದಿಗೆ ದುರ್ವರ್ತನೆ ಅಸಭ್ಯವರ್ತನೆ, ಹಾಗೂ ಸುಳ್ಳು ಆಪಾದನೆಯ ದೂರು ಅರ್ಜಿಗಳನ್ನು ಸಲ್ಲಿಸುವುದು ಹವ್ಯಾಸಗಳನ್ನು ಮುಂದುವರೆಸುವುದು ಹಾಗೂ ಕಲುಷಿತ ವಾತಾವರಣ ಉಂಟು ಮಾಡಿ, ಮೇಲಾಧಿಕಾರಿಗಳಿಗೆ ಮಾನಸಿಕ ತೊಂದರೆ ಉಂಟು ಮಾಡುವ ಪ್ರವೃತ್ತಿ ಹೊಂದಿರುವುದರಿಂದ ಹಾಗೂ ಮೇಲಾಧಿಕಾರಿಗಳ ವಿರುದ್ಧ ಸುಳ್ಳು ಆಪಾದನೆಗಳನ್ನು ನೇರವಾಗಿ ಸಲ್ಲಿಸುವುದು ಇವರೊಬ್ಬ ಬೇಜಬ್ದಾರಿಯುತ ಸರ್ಕಾರಿ ನೌಕರರಾಗಿದ್ದು ಸಂಪೂರ್ಣ, ನೀತಿ ನಿಷ್ಠೆ, ಕರ್ತವ್ಯನಿಷ್ಠೆಯನ್ನು ಪಾಲಿಸದೇ ಸರ್ಕಾರಿ ನೌಕರರು ಮಾಡುವುದು ಅನುಸೂಚಿತವೆಂದು ತೋರುವಂತಹ ಕೆಲಸವನ್ನು ಮಾಡುತ್ತಿದ್ದಾರೆಂದು ತಿಳಿಸಿರುತ್ತಾರೆ.

ಅಲ್ಲದೇ, ಶ್ರೀ ಬಿ.ಸಿ. ಪಾಟೀಲ್, ಫಾರ್ಮಾಸಿಸ್ಟ್, ಇವರು ವಿಚಾರಣಾಧಿಕಾರಿಗಳ ಮುಂದೆ ನೀಡಿರುವ ಲಿಖಿತ ಸ್ವರಕ್ಷಾ ಹೇಳಿಕೆಯಲ್ಲಿ ತಮ್ಮ ಮೇಲಾಧಿಕಾರಿಗಳು, ಇಲಾಖೆಯ ನಿರ್ದೇಶಕರು, ಎಲ್ಲಾ ಹಿರಿಯ ಅಧಿಕಾರಿಗಳು, ಕಾರ್ಯದರ್ಶಿಗಳು, ಹಾಗೂ 2001 ರಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅಂದಿನ ಜಾಗೃತ ಅಧಿಕಾರಿಗಳ ಮೇಲೂ ದೂರಿದ್ದಾರೆ. ಹಾಗೂ ಅಸಂಬಂಧವಾಗಿ ಆರೋಪಗಳನ್ನು

ಪ್ರಲಾಪಿಸಿದ್ದಾರೆ. ಇವರ ಲೇಖನಿಯ ಹರಿತವಾದ ಬರವಣಿಗೆಗೆ ಇಲಾಖೆಯ ಸಿಬ್ಬಂದಿ ಹಾಗೂ ಅಧಿಕಾರಿಗಳೆಲ್ಲಾ ವಿಷಯ ವಸ್ತುಗಳಾಗಿದ್ದಾರೆ. ಹಾಗೂ ಇವರು ದೂರುಗಳನ್ನು ಸಲ್ಲಿಸುವುದು ಸಮುಚಿತ ಮಾರ್ಗದಲ್ಲಿ ಮಾಡದೆ ಅವರು ನೇರವಾಗಿ ಪತ್ರವ್ಯವಹಾರಗಳನ್ನು ಮಾನ್ಯ ಮುಖ್ಯಮಂತ್ರಿಗಳು, ಮಾನ್ಯ ಮುಖ್ಯ ಕಾರ್ಯದರ್ಶಿಗಳು, ಇಲಾಖೆಯ ಪ್ರಧಾನ ಕಾರ್ಯದರ್ಶಿಗಳು, ಮಂತ್ರಿ ಮಹೋದಯರು, ಜನಪ್ರತಿನಿಧಿಗಳು ಎಲ್ಲರನ್ನು ತಲುಪಿದೆ. ಇವರು ನೇರವಾಗಿ ತನಗೆ ಸರಿಕಾಣದ ಎಲ್ಲಾ ಸಿಬ್ಬಂದಿ ಅಧಿಕಾರಿಗಳ ಮೇಲೂ ಹುರುಳಿರಲಿ ಇಲ್ಲದಿರಲಿ ಆಪಾದನೆಗಳನ್ನು ಮಾಡಿ ಲಿಖಿತವಾಗಿ ನೇರವಾಗಿ ಸಂಬಂಧಪಟ್ಟ ಮೇಲಾಧಿಕಾರಿಗಳಿಗೆ ಬರೆಯುವುದನ್ನು ವೃತ್ತಿ, ಪ್ರವೃತ್ತಿ ಹಾಗೂ ಹವ್ಯಾಸ ಮಾಡಿಕೊಂಡಿರುವುದು ಅವಿಚ್ಛಿನ್ನವಾಗಿ ಕಂಡುಬರುತ್ತದೆಂದು ತಿಳಿಸಿರುತ್ತಾರೆ. ಹಾಗೂ ಆಧಾರಿತ ನೌಕರರ ಸ್ವರಕ್ಷಾ ಹೇಳಿಕೆಯನ್ನು ಪರಿಶೀಲಿಸಿ ನೋಡಿದಾಗ ಇವರು ತಮ್ಮ ಲೆಜಿಟಿಮೇಟ್ ಡ್ಯೂಟಿ" ಮರೆತು ಈ ಪತ್ರ ವ್ಯವಹಾರವನ್ನೇ ಮಾಡಿಕೊಂಡಿದ್ದಾರೆ ಮತ್ತು ಇವರ ಸೇವಾ ಅವಧಿಯ ಸಿಂಹಪಾಲು ಸಮಯ ಲಿಖಿತ ದೂರುಗಳನ್ನು ಬರೆಯುವುದು, ಸಲ್ಲಿಸುವುದರಲ್ಲೇ ಸಮಯ ಕಳೆದಿದ್ದಾರೆಂದು ಇವರ ವಿರಾಟ ಸ್ವರೂಪ ಮತ್ತು ಬ್ರಹ್ಮಾಂಡದರ್ಶನವನ್ನು ಹೊರಗೆಡುವುತ್ತವೆ ಎಂದು ತಿಳಿಸಿ ಸದರಿ ನೌಕರರು ನಡತೆ ನಿಯಮಗಳನ್ನು ಪರಿಶೀಲಿಸಿದಾಗ 1966ರ 27ನೇ ನಿಯಮದ ಉಲ್ಲಂಘನೆಯಾಗಿದೆ ಎಂದು ಹಾಗೂ ಆಪಾದಿತರ ವಿರುದ್ಧ ಮಾಡಲಾದ ಆರೋಪವು ಸಾಬೀತಾಗಿದೆಯೆಂದು ತಮ್ಮ ವರದಿಯಲ್ಲಿ ತಿಳಿಸಿರುತ್ತಾರೆ.

ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯಲ್ಲಿ ನಿರ್ಣಯದ ವರದಿಯನ್ನು ಪರಿಶೀಲಿಸಿ ಹಾಗೂ ನೌಕರರು ಸಲ್ಲಿಸಿದ ಲಿಖಿತ ಅಹವಾಲನ್ನು ಪರಿಶೀಲಿಸಿದ ತರುವಾಯ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್(18)ಸಿಆರ್-38:2001-02, ದಿನಾಂಕ:10ನೇ ಜೂನ್ 2004**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ:ಜಿ.ಬಿ. ದೇಸಾಯಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರು, ಆದ ನಾನು ಶ್ರೀ ಬಿ.ಸಿ. ಪಾಟೀಲ, ಫಾರ್ಮಾಸಿಸ್ಟ್, ಪ್ರಾಥಮಿಕ ಆರೋಗ್ಯ ಕೇಂದ್ರ, ತುರುವಿಹಾಳ್, ರಾಯಚೂರು ಜಿಲ್ಲೆ, ಇವರ ಮೇಲೆ ಕರ್ತವ್ಯ ಲೋಪ ಮತ್ತು ದುರ್ನಡತೆ ಆರೋಪವು ಸಾಬೀತಾಗಿರುವುದರಿಂದ, ದಂಡನೆಯಾಗಿ ಸದರಿ ನಿಯಮ 8(8)ರ ಪ್ರಕಾರ ಕೂಡಲೇ ಜಾರಿಗೆ ಬರುವಂತೆ ಸರ್ಕಾರದ ಸೇವೆಯಿಂದ ವಜಾಗೊಳಿಸಿರುತ್ತೇನೆ.

**ಡಾ: ಜಿ.ಬಿ. ದೇಸಾಯಿ**

ಪಿ.ಆರ್. 871 ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು.

**ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ**

**ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು-560 001**

**ಸಂಖ್ಯೆ:ಕರಾಆ:ಆಡಳಿತ:27:2004, ದಿನಾಂಕ: 15ನೇ ಜೂನ್ 2004**

**ವಿಷಯ:** ಧಾರವಾಡ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಸದಸ್ಯರ ಆಯ್ಕೆ ಬಗ್ಗೆ.

ಧಾರವಾಡ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಸದಸ್ಯರ ಸ್ಥಾನಕ್ಕೆ ಸೂಕ್ತರಾದವರನ್ನು ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 10(1)(ಎ)ರಡಿಯಲ್ಲಿ ಆಯ್ಕೆ ಮಾಡುವ ಸಲುವಾಗಿ ಅರ್ಹ ಅಭ್ಯರ್ಥಿಗಳಿಂದ ನಿಗದಿತ ಅರ್ಜಿ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಆಯ್ಕೆ ಬಯಸಿ ಅರ್ಜಿ ಸಲ್ಲಿಸುವುದಕ್ಕಿಂತ ಮುಂಚಿತವಾಗಿ ಆಸಕ್ತಿವುಳ್ಳವರು ಗ್ರಾಹಕ ಸಂರಕ್ಷಣಾ ಕಾಯ್ದೆ 1986 ಮತ್ತು ಕರ್ನಾಟಕ ಗ್ರಾಹಕ ಸಂರಕ್ಷಣಾ ನಿಯಮಗಳು 1988 ಇವುಗಳನ್ನು ಓದಿ ತಿಳಿದುಕೊಂಡು ಪ್ರತಿ ತಿಂಗಳು ರೂ.3000-00 ಗೌರವಧನ ಮತ್ತು ರೂ.300-00 ಸಾರಿಗೆ ಭತ್ಯೆಯನ್ನು ಪಡೆದು ಸದಸ್ಯರಾಗಿ ಕಾರ್ಯನಿರ್ವಹಿಸಲು ಇಚ್ಛೆಯುಳ್ಳವರು ಈ ಕೆಳಕಂಡ ಅರ್ಹತೆಯನ್ನು ಹೊಂದಿದ್ದಲ್ಲಿ ಮಾತ್ರ ನಿಗದಿತ ಅರ್ಜಿ ನಮೂನೆಯಲ್ಲಿ ಅರ್ಜಿಗಳನ್ನು ಅಗತ್ಯ ದಾಖಲೆಗಳ ದೃಢೀಕರಣ ಪ್ರತಿಗಳೊಂದಿಗೆ ದಿನಾಂಕ 24ನೇ ಜುಲೈ 2004ರ ಸಂಜೆ 5-00 ಗಂಟೆಯೊಳಗೆ ಅಧ್ಯಕ್ಷರು, ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ಧಾರವಾಡ ಇವರಿಗೆ ಅರ್ಜಿಯನ್ನು ಸಲ್ಲಿಸತಕ್ಕದ್ದು.

ಸದಸ್ಯರಾಗಿ ಆಯ್ಕೆಯಾಗಲು ಇರಬೇಕಾದ ಅರ್ಹತೆಗಳು

1) ಅರ್ಜಿ ಸಲ್ಲಿಸುವ ದಿನಾಂಕದಂದಿಗೆ ಕನಿಷ್ಠ 35 ವರ್ಷ ವಯಸ್ಸಾಗಿರಬೇಕು ಹಾಗೂ 60 ವರ್ಷ ವಯಸ್ಸಿನೊಳಗಿರಬೇಕು.

2) ಯಾವುದಾದರೂ ಅಂಗೀಕೃತ ವಿಶ್ವವಿದ್ಯಾಲಯದ ಪದವೀಧರರಾಗಿರಬೇಕು.

3) ಪ್ರಾಮಾಣಿಕತೆ, ದಕ್ಷತೆ ಮತ್ತು ನಿಷ್ಠೆ ಇರುವುದರ ಜೊತೆಗೆ ಅರ್ಥಶಾಸ್ತ್ರ, ಕಾನೂನು, ವಾಣಿಜ್ಯ ಲೆಕ್ಕಪತ್ರ, ಕೈಗಾರಿಕೆ, ಸಾರ್ವಜನಿಕ ವ್ಯವಹಾರಗಳು ಅಥವಾ ಸಾರ್ವಜನಿಕ ಆಡಳಿತ ಇವುಗಳಲ್ಲಿನ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ಕನಿಷ್ಠ 10 ವರ್ಷಗಳ ಅನುಭವವುಳ್ಳವರಾಗಿರಬೇಕು.

4) ನಿಗದಿತ ಅರ್ಜಿ ನಮೂನೆಗಳ ಪ್ರತಿಯನ್ನು ಯಾವುದೇ ಶುಲ್ಕವಿಲ್ಲದಂತೆ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ಧಾರವಾಡ ಜಿಲ್ಲೆ, ಧಾರವಾಡ ಇಲ್ಲಿ ಖುದ್ದಾಗಿ ಹಾಜರಾಗಿ ಪಡೆಯುವುದರ ಮೂಲಕ ಸ್ವೀಕರಿಸಬಹುದು.

ಮಾನ್ಯ ಅಧ್ಯಕ್ಷರ ಆದೇಶಾನುಸಾರ,

**ಶ್ರೀದೇವಿ ಎಸ್. ಅಂಗಡಿ**

ಪಿ.ಆರ್. 893 ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿಗಳು,

ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬೆಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ:801:ಡಿಟಿಸಿಆರ್:1998-99, ದಿನಾಂಕ: 20ನೇ ಮೇ 2004**

**ಉಪಸ್ಥಿತರು** : ಶ್ರೀ ಗೋವಿಂದಪ್ಪ
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ದ.ಕ.ಜಿಲ್ಲೆ, ಮಂಗಳೂರು.

ಫಿರ್ಯಾದುದಾರರು : ಪೊಲೀಸ್ ಉಪ ನಿರೀಕ್ಷಕರು, ಉಳ್ಳಾಲ ಪೊಲೀಸ್ ಠಾಣೆ, ಉಳ್ಳಾಲ, ಮಂಗಳೂರು.
ಆಪಾದಿತರು : ಪರಾರಿಯಾಗಿರುತ್ತಾರೆ.

**ಪ್ರಕರಣದ ಮುಖ್ಯಾಂಶಗಳು**

ದಿನಾಂಕ: 10-1-1999 ರಂದು ಬೆಳಗ್ಗಿನ ಜಾವ 3-00 ಗಂಟೆಗೆ ಮಂಗಳೂರು ತಾಲ್ಲೂಕು ತಲಪಾಡಿ ಗ್ರಾಮದ ತಲಪಾಡಿ ಆಹಾರ ತಪಾಸಣಾ ಕೇಂದ್ರದ ಬಳಿ ಉಳ್ಳಾಲ ಆರಕ್ಷಕ ಠಾಣೆಯ ಹೆಚ್.ಸಿ. ಶ್ರೀ ಕೆ. ವೆಂಕಪ್ಪ ಶೆಟ್ಟಿ ಮತ್ತು ಪಿ.ಸಿ. ಗಳಾದ ಪುರಂದರ ಮತ್ತು ಸುಬ್ರಾಯ ಎಂಬುವರು ತಪಾಸಣೆ ನಡೆಸುತ್ತಿರುವಾಗ, ಮಂಗಳೂರು ಕಡೆಯಿಂದ ಕೇರಳದ ಕಡೆಗೆ ಹೋಗುವ ಲಾರಿ ಸಂಖ್ಯೆ: ಕೆಎಲ್-7 ಜೆ-4669ನ್ನು ನಿಲ್ಲಿಸಿದಾಗ ಸದ್ರಿ ಲಾರಿಯಲ್ಲಿ ಸರಕು ಏನಿದೆ ಎಂದು ವಿಚಾರಿಸಲು, ಖಾಲಿ ಎಂದು ಲಾರಿ ಚಾಲಕನು ಉತ್ತರಿಸಿದ್ದು ಅನುಮಾನದ ಮೇಲೆ ಲಾರಿಯನ್ನು ಪರಿಶೀಲನೆ ಮಾಡುವಲ್ಲಿ, ಲಾರಿಯ ಚಾಲಕನು ಹಾಗೂ ಇನ್ನೊಬ್ಬ ಆಸಾಮಿಯು ಲಾರಿಯಿಂದ ಜಿಗಿದು ಪರಾರಿಯಾಗಿರುತ್ತಾರೆ. ಸಂಶಯದಿಂದ ಪಂಚಾಯತುದಾರರುಗಳೊಂದಿಗೆ ಪರಿಶೀಲನೆ ಮಾಡಲು, ಲಾರಿಯ ಬಾಡಿಯ ಒಳಭಾಗದ ಮೇಲ್ಬದಿಯ ಹಲಗೆಗೆ ಹಾಕಿದ್ದ ಸ್ಕ್ರೂವನ್ನು ಬಿಚ್ಚಿ ಹಲಗೆಯನ್ನು ಎತ್ತಿ ನೋಡಿದಾಗ ಲಾರಿಯ ಇಡೀ ಬಾಡಿಗೆ ಆವರಿಸಿದಂತೆ ಕಬ್ಬಿಣದ ಟ್ಯಾಂಕನ್ನು ನಿರ್ಮಿಸಿದ್ದು, ಅದರಲ್ಲಿ ದ್ರವ ಪದಾರ್ಥ ಇರುವುದು ಕಂಡು ಬಂತು. ಟ್ಯಾಂಕಿನ ಮೇಲ್ಭಾಗ ಒಂದು ತೂತು ಇದ್ದು ಕೆಳಭಾಗದ ಹಿಂಬದಿಯಲ್ಲಿ ತೂತು ಇದ್ದು, ಸದ್ರಿ ತೂತಿನ ತಿರುಗಣೆಯನ್ನು ಮೀಟಿದಾಗ ಟ್ಯಾಂಕಿಯೊಳಗಿನಿಂದ ಸ್ಪಿರಿಟ್ ಸುರಿದಿದ್ದು, ಟ್ಯಾಂಕಿನಲ್ಲಿ ಸ್ಪಿರಿಟ್ ಇದ್ದು ಈ ರೀತಿಯ ಸ್ಪಿರಿಟನ್ನು ಸಾಗಣೆ ಮಾಡಲು ಯಾವುದೇ ರಹದಾರಿ ಇರಲಿಲ್ಲ. ಸದ್ರಿ ಕಬ್ಬಿಣದ ಟ್ಯಾಂಕನ್ನು ಅಳತೆ ಮಾಡಲಾಗಿ ಟ್ಯಾಂಕಿನ ಉದ್ದ 13 ಅಡಿ, ಅಗಲ 7 ಅಡಿ ಮತ್ತು ದಪ್ಪ 8 ಇಂಚು ಇದ್ದು, ಇದರಲ್ಲಿ ಸುಮಾರು 1750 ಲೀಟರ್ ಸ್ಪಿರಿಟ್ ಇರುವುದು ಕಂಡು ಬಂತು. ಸದ್ರಿ ಸ್ಪಿರಿಟ್‌ನಿಂದ ರಾಸಾಯನಿಕ ಮಾದರಿಗಾಗಿ 2 ಕ್ವಾರ್ಟರ್ ಬಾಟ್ಲಿಗೆ ತೆಗೆದು ಬಾಟ್ಲಿಗಳಿಗೆ ಬಟ್ಟೆದಾರ ಕಟ್ಟಿ ಎಸ್.ಹೆಚ್.ಓ. ಸೀಲ್‌ನಿಂದ ಸೀಲ್ ಮಾಡಿ ಬಾಟ್ಲಿಗಳಿಗೆ ಗುರುತಿನ ಚೀಟಿಗಳನ್ನು ಅಂಟಿಸಿರುತ್ತಾರೆ. ಲಾರಿಯನ್ನು ಪರಿಶೀಲಿಸಲಾಗಿ ಲಾರಿಯ ಸಂಖ್ಯೆ: ಕೆಎಲ್-7 ಜೆ-4669 ಆಗಿದ್ದು, ಇಂಜಿನ್ ಸಂ: ಸಿವೈಎಚ್ 037602 ಹಾಗೂ ಚಾಸೀಸ್ ಸಂಖ್ಯೆ: ಸಿವೈಆರ್ 100682 ಆಗಿದ್ದು, ಇದು ಅಕ್ರಮ ಸ್ಪಿರಿಟ್ ಸಾಗಣೆಯಾಗಿದ್ದ ಕಾರಣ ಲಾರಿಯನ್ನು, ಟ್ಯಾಂಕಿನಲ್ಲಿದ್ದ ಸ್ಪಿರಿಟನ್ನು, ಹಲಗೆ ಮತ್ತು ಬೋರ್ಡುಗಳನ್ನು ಸರಕಾರಕ್ಕೆ ವಶಪಡಿಸಿಕೊಂಡು ಸ್ಥಳದಲ್ಲಿಯೇ ಪಂಚನಾಮೆಯನ್ನು ತಯಾರಿಸಿದ್ದು, ಇದು ಅಬಕಾರಿ ಕಾಯಿದೆ ಉಲ್ಲಂಘನೆಯಾಗಿದ್ದು ಅಬಕಾರಿ ಕಾಯ್ದೆ ಕಲಂ 14 ಮತ್ತು 34ರ ಅಡಿಯಲ್ಲಿ ಮೊಕದ್ದಮೆಯನ್ನು ಸಂಖ್ಯೆ: 2/99 ದಿನಾಂಕ: 10-1-99ರ ಮೂಲಕ ದಾಖಲು ಮಾಡಿ ಮುಂದಿನ ತನಿಖೆಗಾಗಿ ಪ್ರಾಧಿಕಾರದ ಅನುಮತಿಯೊಂದಿಗೆ ಅಬಕಾರಿ ನಿರೀಕ್ಷಕರು, ಉಳ್ಳಾಲ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಈ ಪ್ರಕರಣದಲ್ಲಿ ಜಪ್ತಿಪಡಿಸಲಾಗಿರುವ ವಾಹನ ಮಾಲೀಕರಾದ ಶ್ರೀ ಸುಧಾಕರ ರಾವ್ ಎಂಬವರು ತಮ್ಮ ವಕೀಲರ ಮೂಲಕ ದಿ: 16-3-99 ರಂದು ಈ ಪ್ರಾಧಿಕಾರಕ್ಕೆ ಅರ್ಜಿಯನ್ನು ಸಲ್ಲಿಸಿ ವಾಹನದ ಮಧ್ಯಂತರ ಬಿಡುಗಡೆಗಾಗಿ ಕೋರಿರುತ್ತಾರೆ. ಮಧ್ಯಂತರ ಬಿಡುಗಡೆಗೆ ಕೋರಿದ್ದ ಅರ್ಜಿಯನ್ನು ಈ ಪ್ರಾಧಿಕಾರವು ತಿರಸ್ಕರಿಸಿ ದಿನಾಂಕ: 6.5.99 ರಂದು ಆದೇಶ ನೀಡಿರುತ್ತದೆ. ಪ್ರಾಧಿಕಾರವು ನೀಡಿದ ಆದೇಶದ ವಿರುದ್ಧ ವಾಹನ ಮಾಲೀಕರು ಮಾನ್ಯ ಜಿಲ್ಲಾ ಸತ್ರ ನ್ಯಾಯಾಲಯಕ್ಕೆ ಮೇಲ್ಮನವಿಯನ್ನು ಸಲ್ಲಿಸಿದ್ದು, ಮಾನ್ಯ ಸತ್ರ ನ್ಯಾಯಾಲಯವು ದಿನಾಂಕ: 1-9-99 ರಂದು ಮಧ್ಯಂತರ ಬಿಡುಗಡೆಗೆ ರೂ.2,40,000/- ಬ್ಯಾಂಕ್ ಗ್ಯಾರಂಟಿ ಮತ್ತು ಅಷ್ಟೇ ಮೊತ್ತದ ಇಂಡೆಮ್ನಿಟಿ ಬಾಂಡ್‌ನ್ನು ನೀಡುವ ಷರತ್ತನ್ನು ವಿಧಿಸಿ ಆದೇಶ ನೀಡಿರುತ್ತದೆ. ಮಾನ್ಯ ಸತ್ರ ನ್ಯಾಯಾಲಯದ ಆದೇಶದಂತೆ ರೂ.2,40,000/- ಗಳ ಬ್ಯಾಂಕ್ ಗ್ಯಾರಂಟಿ ಮತ್ತು ಅಷ್ಟೇ ಮೊತ್ತದ ಇಂಡೆಮ್ನಿಟಿ ಬಾಂಡ್‌ನ್ನು ಪಡೆದು ವಾಹನವನ್ನು ದಿನಾಂಕ: 23-12-99ರಂದು ಮಧ್ಯಂತರ ಬಿಡುಗಡೆಗೆ ಈ ಪ್ರಾಧಿಕಾರವು ಆದೇಶ ನೀಡಿದ್ದು ವಾಹನವನ್ನು ಮಾಲೀಕರಿಗೆ ತಾತ್ಕಾಲಿಕವಾಗಿ ಬಿಡುಗಡೆ ಮಾಡಲಾಗಿರುತ್ತದೆ. ದಿ: 2.10.99 ರಂದು ವಾಹನ ಮಾಲೀಕರಿಗೆ ಪ್ರಾಧಿಕಾರವು ಕಾರಣ ಕೇಳಿ ನೋಟೀಸನ್ನು ನೀಡಿದ್ದು, ನೋಟೀಸಿಗೆ ದಿ:16-12-99 ರಂದು ಉತ್ತರವನ್ನು ಸಲ್ಲಿಸಿರುತ್ತಾರೆ.

ಈ ಪ್ರಕರಣದಲ್ಲಿ ಜಪ್ತಿಗೊಳಿಸಲಾಗಿದ್ದ ವಾಹನವನ್ನು ಮಾನ್ಯ ಸತ್ರ ನ್ಯಾಯಾಲಯದ ಆದೇಶದನ್ವಯ ಪ್ರಾಧಿಕಾರಕ್ಕೆ ರೂ.2,40,000/- ಗಳ ಬ್ಯಾಂಕ್ ಗ್ಯಾರಂಟಿಯನ್ನು ನೀಡಿ ಅರ್ಜಿದಾರರು ತಮ್ಮ ವಾಹನವನ್ನು ಮಧ್ಯಂತರ ಬಿಡುಗಡೆಗೆ ಪಡೆಯಲಾಗಿದ್ದು ದಿ: 6.2.2003 ರಂದು ಸದ್ರಿ ವಾಹನವನ್ನು ಪ್ರಾಧಿಕಾರಕ್ಕೆ ಹಿಂತಿರುಗಿಸುತ್ತಾ ಭದ್ರತೆಯಾಗಿ ಇಟ್ಟಿದ್ದ ಬ್ಯಾಂಕ್ ಗ್ಯಾರಂಟಿಯನ್ನು ಹಿಂದಕ್ಕೆ ಪಡೆಯಲು ಕೋರಿದ್ದು ಈ ಪ್ರಾಧಿಕಾರವು ಅರ್ಜಿದಾರರ ಮನವಿಯನ್ನು ಮನ್ನಿಸಿ ಬ್ಯಾಂಕ್ ಗ್ಯಾರಂಟಿಯನ್ನು ಹಿಂತಿರುಗಿಸಿ ವಾಹನವನ್ನು ಹಿಂದಕ್ಕೆ ಪಡೆದು ಅಬಕಾರಿ ನಿರೀಕ್ಷಕರು, ಉಳ್ಳಾಲ ವಲಯ ಇವರ ಸುಪರ್ದಿಗೆ ನೀಡಿರುತ್ತದೆ.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಸರ್ಕಾರದ ಅಭಿಯೋಜನೆ ಪರ 5 ಸಾಕ್ಷಿಗಳನ್ನು, ಪ್ರತಿ ರಕ್ಷಾ ಪರ ಒಂದು ಸಾಕ್ಷಿಯನ್ನು ವಿಚಾರಣೆಗೆ ಒಳಪಡಿಸಿ ಅವರುಗಳ ಹೇಳಿಕೆಗಳನ್ನು ಪಡೆಯಲಾಗಿದೆ. ಈ ಪ್ರಕರಣದಲ್ಲಿ ಸರ್ಕಾರದ ಪರ ಹಾಗೂ ವಾಹನ ಮಾಲೀಕರ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಿಧಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

1) ದಿನಾಂಕ: 10.1.99 ರಂದು ವಾಹನ ಲಾರಿ ಸಂಖ್ಯೆ: ಕೆಎಲ್-7 ಜೆ-4669 ರಲ್ಲಿ ಅಕ್ರಮವಾಗಿ ಸ್ಪಿರಿಟ್ ಸಾಗಣೆ ಮಾಡಲಾಗಿತ್ತೇ?
2) ವಶಪಡಿಸಿಕೊಂಡಿರುವ ವಾಹನ ತನ್ನದೆಂದೂ ಮತ್ತು ತನ್ನ ತಿಳುವಳಿಕೆಗೆ ಬಾರದೇ ಅಕ್ರಮ ಮದ್ಯಸಾರ ಸಾಗಣೆಗೆ ಉಪಯೋಗಿಸಲಾಗಿತ್ತು ಎಂಬುದನ್ನು ವಾಹನ ಮಾಲೀಕರು ಸಾಬೀತುಪಡಿಸಿದ್ದಾರೆಯೇ?
3) ಜಪ್ತಿ ಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷ್ಯಾಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಹಾಗೂ ಮೂರನೇ ಅಂಶವನ್ನು ಕೊನೆಯ ಆದೇಶದಂತೆ.

ಪ್ರಾ.ಸಾ. 1:

ಶ್ರೀ ಬಿ.ಪಿ. ಪುರಂದರ ಗೌಡ, ಆರಕ್ಷಕ, ಉಳ್ಳಾಲ ಆರಕ್ಷಕ ಪೊಲೀಸ್ ಠಾಣೆ ಇವರು ದಿ: 22-6-2000 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷ್ಯವನ್ನು ನೀಡಿರುತ್ತಾರೆ. ತಾವು ದಿ: 9/10 ಜನವರಿ 99 ರಂದು ಕರ್ತವ್ಯದಲ್ಲಿದ್ದಾಗ ಮಂಗಳೂರಿನಿಂದ ಕೇರಳದ ಕಡೆ ಹೋಗುವ ವಾಹನಗಳನ್ನು ತಪಾಸಣೆ ಮಾಡುತ್ತಿದ್ದೆವು. ಆ ದಿನ ಬೆಳಿಗ್ಗೆ 3.00 ಗಂಟೆಗೆ ಗೇಟ್ ಹಾಕಿ ವಾಹನವನ್ನು ಚೆಕ್ ಮಾಡಿದಾಗ ಅಶೋಕ್ ಲೈಲ್ಯಾಂಡ್ ಲಾರಿ ಸಂಖ್ಯೆ: ಕೆಎಲ್-7 ಜೆ-4669ರ ಚಾಲಕನನ್ನು ಹೆಚ್.ಸಿ. ಕೇಳಲಾಗಿ ಖಾಲಿ ಇದೆ ಎಂದು ತಿಳಿಸಿದನು. ನಂತರ ಹಿಂದೆ ಪರಿಶೀಲಿಸಿದಾಗ 13 x 7 ಅಡಿ ಟ್ಯಾಂಕ್ ಇದ್ದು ಅದನ್ನು ಮುಚ್ಚಲಾಗಿತ್ತು. ಚಾಲಕನನ್ನು ದಾಖಲೆಗಳನ್ನು ಕೇಳಿದಾಗ ಚಾಲಕ ಮತ್ತು ಮತ್ತೊಬ್ಬ ಆಸಾಮಿಯು ಲಾರಿಯಿಂದ ಜಿಗಿದು ಓಡಿ ಹೋದರು. ಮುಚ್ಚಳವನ್ನು ತೆಗೆದು ನೋಡಿದಾಗ ಸ್ಪಿರಿಟ್ ಇದ್ದದ್ದು ಕಂಡು ಬಂತು. ಸ್ಥಳದಲ್ಲಿಯೇ ಇದ್ದ ಆಸಾಮಿಯನ್ನು ಕರೆದು ಪಂಚನಾಮೆ ಮಾಡಿ ಲಾರಿಯನ್ನು ಮತ್ತು ಸ್ಪಿರಿಟನ್ನು ಪತ್ತೆ ಹಚ್ಚಲಾಯಿತು. ನಂತರ 100 ಎಂ.ಎಲ್.ನ್ನು ಸ್ಯಾಂಪಲ್‌ಗಾಗಿ ತೆಗೆದು ಲಾರಿಯನ್ನು ಮತ್ತು ಸಾರಾಯಿಯನ್ನು ಜಪ್ತಿಪಡಿಸಲಾಯಿತು. ಸ್ಥಳದಲ್ಲಿಯೇ ಪಂಚನಾಮೆಗೆ ಸಹಿ ಮಾಡಿರುತ್ತೇನೆ. ಪಂಚನಾಮೆಯನ್ನು ನಿಶಾನೆ -1 ಎಂದು ಗುರುತಿಸಲಾಯಿತು. ಲಾರಿಯನ್ನು ನೋಡಿದರೆ ಗುರುತಿಸುತ್ತೇನೆ. ಈ ಸ್ವತ್ತನ್ನು ಮುದ್ದೆಮಾಲು 1 ಎಂದು ಗುರುತಿಸಲಾಯಿತು.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ಈ ದಿನ ಗೇಟಿನಲ್ಲಿ ಹೆಚ್.ಸಿ. ಒಬ್ಬರು ಹಾಗೂ ಪಿ.ಸಿ. ಯವರು ಇಬ್ಬರು ಇದ್ದರು. ಈ ಬಗ್ಗೆ ದಾಖಲೆ ಇದೆ. ಈ ದಾಖಲೆ ಪೊಲೀಸ್ ಠಾಣೆಯಲ್ಲಿದೆ. ಪಂಚರು ಕಾಸರಗೋಡಿನವರು ಅವರು ಮದ್ದಿಗೆ ಹೋಗುವಂತವರು ಯಾವ ಆಸ್ಪತ್ರೆಗೆ ಹೋಗುತ್ತಾರೆ ಎಂಬುದು ಗೊತ್ತಿಲ್ಲ. ಪಂಚನಾಮೆಯನ್ನು ಒಂದು ಪುಟ ಪೂರ್ತಿ, ಇನ್ನೊಂದು ಪುಟದಲ್ಲಿ ಕಾಲು ಭಾಗ ಇದ್ದು ಅದನ್ನು ಹೆಚ್.ಸಿ. ಯವರು ಬರೆದಿರುತ್ತಾರೆ. ಡ್ರೈವರ್‌ನ ಹೆಸರು ಗೊತ್ತಿಲ್ಲ. ಅವನೊಟ್ಟಿಗೆ ಇನ್ನೊಬ್ಬನಿದ್ದ 3.00 ಗಂಟೆಯ ಹೊತ್ತಿಗೆ ವಾಹನವನ್ನು ಚೆಕ್ ಮಾಡಿದ್ದು ವಾಹನದಲ್ಲಿ ಸ್ಪಿರಿಟ್ ಇರಲಿಲ್ಲ ಎಂಬುದು ಸರಿಯಲ್ಲ ಎಂದು, ಚೆಕ್‌ಪೋಸ್ಟಿನಲ್ಲಿ ಕರ್ತವ್ಯ ನಿರ್ವಹಿಸಿಲ್ಲ ಎಂದರೆ ಸರಿಯಲ್ಲ ಎಂದು ಸಾಕ್ಷಿ ನೀಡಿರುತ್ತಾರೆ.

ಪ್ರಾ.ಸಾ: 2

ಶ್ರೀ ಕೆ. ವೆಂಕಪ್ಪ ಶೆಟ್ಟಿ, ಹೆಚ್.ಸಿ., ಉಳ್ಳಾಲ ಆರಕ್ಷಕ ಠಾಣೆ ಇವರು ಪ್ರಾಧಿಕಾರದ ಮುಂದೆ ಹಾಜರಾಗಿ ದಿನಾಂಕ: 22-6-2000 ರಂದು ಹಾಜರಾಗಿ ತಮ್ಮ ಸಾಕ್ಷಿ ನೀಡಿರುತ್ತಾರೆ. ತಾವು ದಿನಾಂಕ: 20-9-99 ರಂದು ಆಹಾರ ತಪಾಸಣಾ ಕೇಂದ್ರದಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಕಬ್ಬಿಣದ ಗೇಟನ್ನು ಹಾಕಿ ಕರ್ನಾಟಕದಿಂದ ಕೇರಳಕ್ಕೆ ಹೋಗುವ ವಾಹನಗಳನ್ನು ಪರಿಶೀಲನೆ ಮಾಡುತ್ತಿದ್ದಾಗ ಬೆಳಗಿನ ಜಾವ ಸುಮಾರು 3.00 ಗಂಟೆಗೆ ಕೇರಳದ ಕಡೆ ಹೋಗಲು ಮಿನಿ ಲಾರಿ ಸಂಖ್ಯೆ: ಕೆಎಲ್-7 ಜೆ-4669 ಬಂದು ಸದ್ರಿ ಗೇಟಿನ ಬಳಿ ನಿಂತಿತು. ಚಾಲಕನಲ್ಲಿ ಸರಕು ಏನಿದೆ ಎಂದು ಕೇಳಲು ಖಾಲಿ ಇದೆ ಎಂದು ಹೇಳಲು ಲಾರಿಯ ಸ್ಪ್ರಿಂಗ್ ಪ್ಲೇಟಿಗೆ ಟಾರ್ಚ್ ಹಾಕಿ ನೋಡಲು, ಏನೋ ವಸ್ತು ಹೇರಿದ ರೀತಿ ಅದು ಬಾಗಿದ್ದು, ಸಂಶಯದಿಂದ ಲಾರಿಯನ್ನು ಪರಿಶೀಲಿಸಲು ಲಾರಿಯ ಒಳ ಮತ್ತು ಹೊರಬದಿಯ ಎತ್ತರದಲ್ಲಿ ವ್ಯತ್ಯಾಸವಿದ್ದು, ಸಂಶಯದಿಂದ ದಾಖಲೆಗಳನ್ನು ಕೇಳಲು ಚಾಲಕನು ಮತ್ತು ಇನ್ನೊಬ್ಬನು ಲಾರಿಯಿಂದ ಹಾರಿ ಓಡಿ ಹೋದರು. ನಂತರ ಲಾರಿಯ ಒಳಗೆಯಿದ್ದ ಕಬ್ಬಿಣದ ಬೋಲ್ಟನ್ನು, ಹಲಗೆಯನ್ನು ಮುರಿದು ನೋಡಿದಾಗ ಅದರೊಳಗೆ ಕಬ್ಬಿಣದ ಟ್ಯಾಂಕ್ ಇರುವುದು ಕಂಡು ಬಂತು. ಅದರಲ್ಲಿ ಏನೋ ಇದೆ ಎಂದು ಸಂಶಯ ಬಂದು ಪಂಚರನ್ನು ಬರಮಾಡಿಕೊಂಡು ಮಿನಿ ಲಾರಿಯನ್ನು ಪರಿಶೀಲಿಸಲಾಗಿ ಲಾರಿಯ ಬಾಡಿಯ ಒಳಗೆ 13 ಅಡಿ ಉದ್ದ, 7 ಅಡಿ ಅಗಲ ಹಾಗೂ 8 " ದಪ್ಪದ ಟ್ಯಾಂಕನ್ನು ಅಳವಡಿಸಿದ್ದು ಕಂಡು ಬಂತು. ಅದರ ಅಡಿ ಕೊನೆಯಲ್ಲಿ ಒಂದು ಪೈಪನ್ನು ಅಳವಡಿಸಿದ್ದು ಅದರ ತಿರುಗಣೆಯನ್ನು ಮೀಟಿದಾಗ ಅದರಿಂದ ಸ್ಪಿರಿಟ್ ಸುರಿಯಿತು. ಇದರಿಂದ ಕರ್ನಾಟಕದಿಂದ ಕೇರಳಕ್ಕೆ ಪರವಾನಿಗೆಯಿಲ್ಲದೆ ಸ್ಪಿರಿಟ್ ಸಾಗಿಸುತ್ತಿರುವುದು ಖಚಿತವಾಯಿತು ಎಂದು ತಿಳಿಸಿರುತ್ತಾರೆ. ಸದ್ರಿ ಟ್ಯಾಂಕ್‌ನಲ್ಲಿರುವ ಸ್ಪಿರಿಟನ್ನು ಅಜಮಾಯಿಸಿ ನೋಡಲು ಅದರಲ್ಲಿ ಸುಮಾರು 1750 ಲೀಟರ್ ಸ್ಪಿರಿಟ್ ಇದೆಯೆಂದು ಅಂದಾಜಿಸಲಾಯಿತು. ಅದೇ ಸ್ಪಿರಿಟ್‌ನಿಂದ ಸ್ಯಾಂಪಲ್‌ಗಾಗಿ 2 ಕ್ವಾರ್ಟರ್ ಬಾಟ್ಲಿಗಳನ್ನು ತೆಗೆದು ಅವುಗಳಿಗೆ ಬಟ್ಟೆದಾರ ಕಟ್ಟಿ ಎಸ್.ಹೆಚ್.ಒ. ಸೀಲ್‌ನಿಂದ ಸೀಲ್ ಮಾಡಲಾಯಿತು. ಅವುಗಳಿಗೆ ಪಂಚರ ಸಹಿ ಇರುವ ಗುರುತಿನ ಚೀಟಿಯನ್ನು ಅಂಟಿಸಲಾಯಿತು. ಈ ಬಗ್ಗೆ ದಿ: 10-1-99 ರಂದು ಬೆಳಗಿನ ಜಾವ 4.00 ಗಂಟೆಯಿಂದ 5.00 ಗಂಟೆಯವರೆಗೆ ಪಂಚನಾಮೆ ತಯಾರಿಸಿದ್ದು ಅದನ್ನು ನಿಶಾನೆ ಪಿ-1 ಎಂದು ಗುರುತಿಸಲಾಯಿತು. ಸದ್ರಿ ಸ್ಪಿರಿಟನ್ನು, ಲಾರಿಯನ್ನು ಸ್ವಾಧೀನಪಡಿಸಿಕೊಂಡು ಠಾಣೆಗೆ ವರದಿ ಮಾಡಿರುವುದಾಗಿ ತಿಳಿಸಿರುತ್ತಾರೆ. ಸದ್ರಿ ವರದಿಯನ್ನು ನಿಶಾನೆ ಪಿ-2 ಎಂದು, ಪ್ರಥಮ ಮಾಹಿತಿ ವರದಿಯನ್ನು ನಿಶಾನೆ ಪಿ-3 ಎಂದು ಲಾರಿ, ಕಬ್ಬಿಣದ ಟ್ಯಾಂಕ್ ಮತ್ತು ಹಲಗೆಗಳನ್ನು ನೋಡಿದರೆ ಅವುಗಳನ್ನು ಗುರುತಿಸುವುದಾಗಿ ತಿಳಿಸಿರುತ್ತಾರೆ. ಅವುಗಳನ್ನು ಮುದ್ದೆಮಾಲು 1 ರಿಂದ 3 ಎಂದು ಗುರುತಿಸಲಾಯಿತು.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ಪಂಚರನ್ನು ಬೆಳಗಿನ ಜಾವ ಸುಮಾರು 3.20 ಕ್ಕೆ ನೋಡಿದೆನು. ಅವರು ತನ್ನ ತಂದೆಗೆ ಹೃದಯ ಬೇನೆಯಿದ್ದು, ಡಾಕ್ಟರನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಪುನಃ ಹಿಂದಕ್ಕೆ ಬಿಟ್ಟು ಮನೆಗೆ ನಡೆದುಕೊಂಡು ಹೋಗುವವರಾಗಿದ್ದರು. ಅವರ ಊರು ಯಾವುದೆಂದು ಹೇಳಲಾಗದು, ಅವರು ವೃತ್ತಿಯಲ್ಲಿ ಕೂಲಿ, ಸ್ಯಾಂಪಲ್ ತೆಗೆಯಲು ಗೇಟಿನ ಬಳಿ ಬಿದ್ದಿದ್ದ ಬಾಟ್ಲಿಗಳನ್ನು ತೆಗೆದುಕೊಂಡೆವು. ಗೇಟಿನ ಬಳಿ ಸಾರಾಯಿ ಅಂಗಡಿಯಿರುವುದು ಗೊತ್ತಿಲ್ಲ. ತಕ್ಷೀರು ಸ್ಥಳದಿಂದ 15 ರಿಂದ 30 ಅಡಿ ದೂರದಲ್ಲಿ ಬ್ರಾಂಡಿ ಅಂಗಡಿ ಇದೆ ಎಂದರೆ ಸರಿಯಲ್ಲ. ಕಾಣುವಷ್ಟು ದೂರದಲ್ಲಿ ಮನೆಗಳಿವೆ ಎಂದರೆ ಸರಿಯಲ್ಲ. ನಮ್ಮ ಠಾಣೆಯಲ್ಲಿ ಎಸ್.ಹೆಚ್.ಒ. ಸೀಲ್‌ಗಳು ಇದ್ದವೇ ಎಂಬುದು ಗೊತ್ತಿಲ್ಲ. ಸ್ಪಿರಿಟ್ 1750 ಲೀಟರ್ ಎಂಬುದನ್ನು ಅಳತೆ ಮಾಡಿಲ್ಲ ಎಂದು ತಿಳಿಸಿರುತ್ತಾರೆ. ಮುಂದುವರೆದು ಲಾರಿಯಲ್ಲಿ ಇಬ್ಬರು ವ್ಯಕ್ತಿಗಳಿದ್ದರು. ಹೆಸರು ಗೊತ್ತಾಗಲಿಲ್ಲ. ಪಂಚನಾಮೆಯನ್ನು ಯಾರು ಬರೆದರು ಎಂಬುದು ನೆನಪಿಲ್ಲ. ಅಂದು ಗೇಟಿನಲ್ಲಿ ಕೆಲಸ ಮಾಡಿದ್ದಕ್ಕೆ ಯಾವುದೇ ದಾಖಲೆ ಇಲ್ಲ. ರಹದಾರಿಯ ಬಗ್ಗೆ ಲಾರಿಯಲ್ಲಿದ್ದವರು

ಓಡಿಹೋದುದರಿಂದ ಪ್ರಶ್ನೆ ಮಾಡಲಿಲ್ಲ. ಲಾರಿಯಲ್ಲಿ ಸ್ಪಿರಿಟ್ ಇರಲಿಲ್ಲ ಎಂದರೆ ಸರಿಯಲ್ಲ. ಪಂಚನಾಮೆಯನ್ನು ಠಾಣೆಯಲ್ಲಿ ಮಾಡಿದ್ದು ಎಂದರೆ ಸರಿಯಲ್ಲ ಎಂದು ತಿಳಿಸಿರುತ್ತಾರೆ. ಪ್ರಾಸ.2 ಇವರು ಮುಖ್ಯ ವಿಚಾರಣೆಯ ಪ್ರಾರಂಭದಲ್ಲಿ ದಿನಾಂಕವನ್ನು 29-9-99 ಎಂದು ಹೇಳಿರುತ್ತಾರೆ. ಆದರೆ ಮುಂದುವರೆದ ಘಟನೆಯ ಬಗ್ಗೆ ಸಾಕ್ಷಿ ನುಡಿಯುತ್ತಾ ದಿ:10-1-99ರ ಬೆಳಗ್ಗಿನ ಜಾವದ 4-00 ರಿಂದ 5-00 ಗಂಟೆಯ ಅವಧಿಯಲ್ಲಿ ಪಂಚನಾಮೆಯನ್ನು ತಯಾರಿಸಿರುವುದಾಗಿ ತಿಳಿಸಿರುತ್ತಾರೆ. ಇದರಿಂದ ವಾಹನ ಮಾಲೀಕರಿಗೆ ಯಾವುದೇ ಪ್ರಯೋಜನಕಾರಿಯಾದ ಅಂಶಗಳು ಕಂಡು ಬರುವುದಿಲ್ಲ.

**ಪ್ರಾ.ಸಾ-3:**

ಶ್ರೀ ಎಂ. ಸುಂದರ, ಸಹಾಯಕ ಉಪ ಆರಕ್ಷಕರು, ಉಳ್ಳಾಲ ಪೊಲೀಸ್ ಠಾಣೆ ಇವರು ದಿನಾಂಕ:24-1-02 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ಹೇಳಿಕೆ ನೀಡಿರುತ್ತಾರೆ. ದಿನಾಂಕ: 10-1-99 ರಂದು ಬೆಳಿಗ್ಗೆ 5.30ಕ್ಕೆ ತಲಪಾಡಿಯಲ್ಲಿ ಕರ್ತವ್ಯದಲ್ಲಿದ್ದ ಹೆಚ್.ಸಿ. ಶ್ರೀ ಕೆ. ವೆಂಕಪ್ಪ ಶೆಟ್ಟಿ ಇವರು ನೀಡಿದ ವರದಿಯ ಮೇಲೆ ಉಳ್ಳಾಲ ಪೊಲೀಸ್ ಠಾಣೆ ಪ್ರಕರಣ 2/99 ಮೂಲಕ ಪ್ರಕರಣ ದಾಖಲಿಸಿಕೊಂಡು ಮಾನ್ಯ ನ್ಯಾಯಾಲಯಕ್ಕೂ ಹಾಗೂ ಮೇಲಾಧಿಕಾರಿಗಳಿಗೂ ಒಪ್ಪಿಸಿದೆನು. ಸದ್ರಿ ವರದಿಗಳನ್ನು ನಿಶಾನೆ ಪಿ-1 ಮತ್ತು ನಿಶಾನೆ ಪಿ-3 ಎಂದು ಗುರುತಿಸಲಾಗಿದೆ. ಮೂಲ ಪ್ರತಿಗಳನ್ನು ನ್ಯಾಯಾಲಯಕ್ಕೆ ಒಪ್ಪಿಸಿದ್ದೇನೆ. ಈ ಪ್ರಕರಣದ ಸ್ವತ್ತುಗಳನ್ನು ಸ್ವೀಕರಿಸಿ ಮಾನ್ಯ ನ್ಯಾಯಾಲಯಕ್ಕೆ ಸ್ವತ್ತು ಪಟ್ಟಿಯನ್ನು ಸಲ್ಲಿಸಲಾಗಿದ್ದು ಸ್ವತ್ತುಗಳ ವಿವರ ಈ ರೀತಿ ಇರುತ್ತದೆ. 1) ಅಶೋಕ್ ಲೈಲ್ಯಾಂಡ್ ಲಾರಿ ಸಂಖ್ಯೆ: ಕೆಎಲ್-7 ಜೆ-4669 2) ಲಾರಿಯಲ್ಲಿದ್ದ 1750 ಲೀಟರ್ ಸ್ಪಿರಿಟ್ 3) ಕಬ್ಬಿಣದ ಟ್ಯಾಂಕಿಗೆ ಮುಚ್ಚಲ್ಪಟ್ಟ ಹಲಗೆಗಳು 4) ಕಬ್ಬಿಣದ ಬೋಲ್ಟ್‌ಗಳು 5) ಸ್ಯಾಂಪಲ್ ಬಾಟ್ಲಿ, ಮುಂದಿನ ತನಿಖೆಯನ್ನು ಪಿ.ಎಸ್.ಐ. ರವರು ನಡೆಸಿರುವುದಾಗಿ ತಿಳಿಸಿರುತ್ತಾರೆ. ಅರ್ಜಿದಾರರ ಪರ ವಕೀಲರು ಹಾಜರಿಲ್ಲದ ಕಾರಣ ಪಾಟೀ ಸವಾಲು ಇಲ್ಲ ಎಂದು ಪರಿಗಣಿಸಲಾಗಿದೆ.

**ಪ್ರಾ.ಸಾ. 4:**

ಶ್ರೀ ಯು.ರಾಮ, ಅಬಕಾರಿ ರಕ್ಷಕ, ಉಳ್ಳಾಲ ವಲಯ ಇವರು ದಿನಾಂಕ: 24-1-2002 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ಅವರು ದಿನಾಂಕ: 1-2-99 ರಂದು ಮಾದರಿ ಶೀಷೆಯನ್ನು ರಾಸಾಯನಿಕ ತಜ್ಞರಲ್ಲಿಗೆ ಕೊಂಡು ಹೋಗಿ ದಿನಾಂಕ: 27-2-99 ರಂದು ರಾಸಾಯನಿಕ ವಿಶ್ಲೇಷಕರ ವರದಿ, ವಿಶ್ಲೇಷಿಸಿದ ಬಾಟ್ಲಿಗಳನ್ನು ತಂದು ಉಳ್ಳಾಲ ವಲಯದ ನಿರೀಕ್ಷಕರಿಗೆ ಒಪ್ಪಿಸಿರುವುದಾಗಿ ತಿಳಿಸಿರುತ್ತಾರೆ. ಇದನ್ನು ನಿಶಾನೆ ಪಿ-4 ಎಂದು ಗುರುತಿಸಲಾಗಿದೆ.

ಅರ್ಜಿದಾರರ ಪರ ವಕೀಲರು ಹಾಜರಿಲ್ಲದ ಕಾರಣ ಪಾಟೀ ಸವಾಲು ಇಲ್ಲ ಎಂದು ಪರಿಗಣಿಸಲಾಗಿದೆ.

**ಪ್ರಾ.ಸಾ. 5:**

ಶ್ರೀ ಯಶವಂತ ಕುಮಾರ್, ನಿವೃತ್ತ ಅಬಕಾರಿ ನಿರೀಕ್ಷಕರು, ಉಳ್ಳಾಲ ವಲಯ ಇವರು ದಿನಾಂಕ: 12-12-2002 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ನೀಡಿರುತ್ತಾರೆ. ಅವರು ದಿನಾಂಕ: 1-2-99 ರಂದು ಈ ತಕ್ಷೀರಿಗೆ ಸಂಬಂಧಪಟ್ಟ ದಾಖಲೆ ಹಾಗೂ ಸ್ವತ್ತುಗಳನ್ನು ಉಳ್ಳಾಲ ಪೊಲೀಸ್ ಉಪ ನಿರೀಕ್ಷಕರಿಂದ ಪಡೆದು ಅದೇ ದಿನದಂದು ಉಳ್ಳಾಲ ವಲಯ ಕಛೇರಿಯ ಅಬಕಾರಿ ರಕ್ಷಕ ಶ್ರೀ ಯು. ರಾಮ ಇವರ ಮೂಲಕ ರಾಸಾಯನಿಕ ತಜ್ಞರಿಗೆ ಸ್ಯಾಂಪಲ್ ಬಾಟ್ಲಿ ಕೋರಿಕೆ ಪತ್ರ ಹಾಗೂ ಮಾದರಿ ಸೀಲನ್ನು ಕಳುಹಿಸಿದ್ದು, ದಿನಾಂಕ: 6-2-99 ರಂದು ತಜ್ಞರ ವರದಿ ಮತ್ತು ಬಾಟ್ಲಿಯನ್ನು ಪಡೆದುಕೊಂಡಿರುತ್ತೇನೆ. ದಿನಾಂಕ: 22-7-99 ರಂದು ಸ್ವಾಧೀನಪಡಿಸಿಕೊಂಡ ಸ್ಪಿರಿಟನ್ನು ಸಾರಾಯಿ ಸಂಸ್ಕರಣಾ ಘಟಕಕ್ಕೆ ನೀಡಿರುತ್ತೇನೆ, ಮತ್ತು ದಿನಾಂಕ: 3-1-2000 ರಂದು ಅಬಕಾರಿ ಉಪ ಆಯುಕ್ತರ ಆದೇಶದಂತೆ ಜಪ್ತುಪಡಿಸಿದ ವಾಹನವನ್ನು ವಾಹನ ಮಾಲೀಕರಿಗೆ ನೀಡಿರುತ್ತೇನೆ. ತಾನು ನಿವೃತ್ತಿ ಹೊಂದಿದ್ದು ಪ್ರಕರಣದ ಕಡತಗಳನ್ನು ನಂತರ ಬಂದ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಿರುವುದಾಗಿ ತಿಳಿಸಿರುತ್ತಾರೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ಪ್ರಕರಣದ ತನಿಖೆಯನ್ನು ನಿರ್ವಹಿಸಿರುತ್ತೇನೆ. ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಚಾಲಕ ಮತ್ತು ವಾಹನದ ಮಾಲೀಕರು ಯಾರು ಎಂಬುದರ ಬಗ್ಗೆ ತನಿಖೆ ಮಾಡಿರುವುದಿಲ್ಲ ಎಂದು ತಿಳಿಸಿರುತ್ತಾರೆ.

**ಡಿ.ಡಬ್ಲ್ಯೂ-1**

ಈ ಪ್ರಕರಣದಲ್ಲಿ ಜಪ್ತಿಗೊಳಿಸಿರುವ ವಾಹನದ ಮಾಲೀಕರಾದ ಶ್ರೀ ಸುಧಾಕರ ರಾವ್ ಇವರು ದಿನಾಂಕ: 12-12-02ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷ್ಯ ನೀಡಿರುತ್ತಾರೆ. ತಾನು ವಾಹನ ಸಂಖ್ಯೆ: ಕೆಎಲ್-7 ಜೆ-4669ರ ನೊಂದಣಿ ಮಾಲೀಕನಿರುತ್ತೇನೆ. ಈ ವಾಹನಕ್ಕೆ ದುಗಾರ್ ಫೈನಾನ್ಸ್ ಕಂಪನಿಯಿಂದ ಸಾಲವನ್ನು ಪಡೆದಿದ್ದೇನೆ. ದಿನಾಂಕ: 5-7-98 ರಂದು ಜೇನಿ ಜಾಕಬ್ ಎಂಬುವರೊಂದಿಗೆ ಒಪ್ಪಂದ ಮಾಡಿಕೊಂಡಿದ್ದೆ. ಅದನ್ನು ರೂ.1,85,000/- ಗಳಿಗೆ ಮಾರಿದ್ದೆ. ನನಗೆ ರೂ.92,800/- ಗಳು ಬಂದಿದೆ. ಅವರು ದುಗಾರ್ ಫೈನಾನ್ಸ್‌ಗೆ ರೂ. 88,000/- ಗಳನ್ನು ಕಂತುಗಳ ಮುಖಾಂತರ ಕೊಡಬೇಕಾಗಿತ್ತು. ಅದೇ ದಿನ ವಾಹನವನ್ನು ಅವನಿಗೆ ಬಿಟ್ಟುಕೊಟ್ಟು ಅಂದೇ ಮಲಯಾಳಿ ಭಾಷೆಯಲ್ಲಿ ಒಂದು ಕರಾರನ್ನು ಮಾಡಿರುತ್ತೇನೆ. ಅದನ್ನು ಹಾಜರುಪಡಿಸಿದ್ದು ಅದನ್ನು ನಿಶಾನೆ ಡಿ-1 ಎಂದು ಗುರುತಿಸಲಾಯಿತು. ಕರಾರನ್ನು ಇಂಗ್ಲೀಷ್‌ನಲ್ಲಿ ತರ್ಜುಮೆ ಮಾಡಿದ ಪ್ರತಿಯನ್ನು ಹಾಜರುಪಡಿಸಿದ್ದು ಅದನ್ನು ನಿಶಾನೆ ಡಿ-2 ಎಂದು ಗುರುತಿಸಲಾಯಿತು.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ವಾಹನದ ನೋಂದಣಿ ಪತ್ರದ ದೃಢೀಕೃತ ನಕಲನ್ನು ಹಾಜರುಪಡಿಸಲಾಗಿದ್ದು ಅದನ್ನು ನಿಶಾನೆ ಡಿ-3 ಎಂದು, ದುಗಾರ್ ಫೈನಾನ್ಸಿಗೆ ಕೊಡಬೇಕಾದ ಹಣವನ್ನು, ವಾಹನವನ್ನು ಪಡೆದುಕೊಂಡ ಜೇನಿ ಜಾಕಬ್‌ರವರು ಪಾವತಿ ಮಾಡಿಲ್ಲದ್ದಕ್ಕೆ ದಿನಾಂಕ: 22-12-98 ರಂದು ದುಗಾರ್ ಫೈನಾನ್ಸ್ ನೀಡಿದ್ದ ಕಂತು ಬಾಕಿ ಪತ್ರವನ್ನು ಹಾಜರುಪಡಿಸಿದ್ದು ಅದನ್ನು ನಿಶಾನೆ ಡಿ-4 ಎಂದು

ಗುರುತಿಸಲಾಯಿತು. ದಿನಾಂಕ: 5-7-98 ರಿಂದ ವಾಹನವನ್ನು ಜೇನಿ ಜಾಕಬ್ ಓಡಿಸುತ್ತಿದ್ದರು. ನನ್ನ ಹೆಸರಿನಲ್ಲಿದ್ದ ವಾಹನವನ್ನು ಸೀಜ್ ಮಾಡಲಾಗಿದೆ ಎಂದು ಉಳ್ಳಾಲ ಪೊಲೀಸರಿಂದ ವರ್ತಮಾನ ಬಂದಿದ್ದು, ನಾನು ಯಾವುದೇ ಸ್ಪಿರಿಟನ್ನು ಸಾಗಣೆ ಮಾಡಿಲ್ಲವೆಂದು ತಿಳಿಸಿರುತ್ತಾನೆ.

ಮಾನ್ಯ ಎ.ಡಿ.ಪಿ. ಯವರ ಪಾಟೀ ಸವಾಲಿಗೆ ಉತ್ತರಿಸುತ್ತಾ ತಾನು ಫೈನಾನ್ಸ್‌ರವರಿಂದ ಪಡೆದ ಸಾಲದ ಹಣ ಮರುಪಾವತಿಯಾದ ನಂತರ ಈ ಕುರಿತು ಕಾನೂನಿನಂತೆ ಆರ್.ಟಿ.ಓ. ಇವರಿಗೆ ಅರ್ಜಿ ಸಲ್ಲಿಸಲು ವಿಳಂಬವಾಯಿತು. ದಿನಾಂಕ: 5-7-98 ರಿಂದ ಈ ವಾಹನದ ಮೇಲೆ ನನಗೆ ಯಾವುದೇ ನಿಯಂತ್ರಣ ಇಲ್ಲ. ಈ ಕಾರಣದಿಂದ ದಿನಾಂಕ: 5-7-98 ರಿಂದ ಈ ವಾಹನ ಮಾಲೀಕನು ನಾನಲ್ಲ ಎಂದು ಸಾಕ್ಷ್ಯ ನೀಡಿರುತ್ತಾರೆ. ಈ ಸಾಕ್ಷಿಯು ತಾನು ವಾಹನವನ್ನು ದಿ: 5-7-98 ರಂದು ಜಾಕಬ್ ಎಂಬವರಿಗೆ ಮಾರಾಟ ಮಾಡಿದ್ದುದಾಗಿ ಮತ್ತು ಪಾಟೀ ಸವಾಲಿನಲ್ಲಿ ದಿ: 5-7-98 ರಿಂದ ತಾನು ವಾಹನದ ಮಾಲಿಕನಲ್ಲವೆಂದು ಸ್ಪಷ್ಟವಾಗಿ ನುಡಿದಿದ್ದಾನೆ. ಈ ಕಾರಣಕ್ಕಾಗಿ ಮಾಲಿಕನಲ್ಲದ ಈ ಸಾಕ್ಷಿಯು ತನಗೆ ವಾಹನವನ್ನು ಬಿಟ್ಟು ಕೊಡುವಂತೆ ಕೇಳುವುದು ಕಾನೂನಿನಂತೆ ಸಮ್ಮತವಲ್ಲ.

ಒಂದು ಪಕ್ಷ ಈತನೇ ವಾಹನ ಮಾಲಿಕನೆಂದು ಪರಿಗಣಿಸಿದರೂ ಈ ಅಕ್ರಮ ಮದ್ಯಸಾರದ ಸಾಗಾಣಿಕೆ ತನ್ನ ತಿಳುವಳಿಕೆಗೆ ಬಾರದೆ ನಡೆದಿದೆ ಎಂದು ಸಾಬೀತುಪಡಿಸುವುದು ವಾಹನ ಮಾಲೀಕರ ಜವಾಬ್ದಾರಿಯಾಗಿದ್ದು ಈ ಅಕ್ರಮವನ್ನು ತಡೆಗಟ್ಟಲು ಯಾವುದೇ ಮುನ್ನೆಚ್ಚರಿಕೆಯನ್ನು ತೆಗೆದುಕೊಂಡಿರುವುದಕ್ಕೆ ಯಾವುದೇ ಸಾಕ್ಷಿ ಪುರಾವೆಯನ್ನು ಪ್ರಾಧಿಕಾರದ ಮುಂದೆ ಹಾಜರುಪಡಿಸಿರುವುದಿಲ್ಲ. ಅಲ್ಲದೆ ಜಪ್ತಿಪಡಿಸಲಾಗಿರುವ ಲಾರಿಯಲ್ಲಿ ಗುಪ್ತವಾಗಿ ಟ್ಯಾಂಕನ್ನು ಅಳವಡಿಸಿದ್ದು ಈ ರೀತಿಯ ಟ್ಯಾಂಕನ್ನು ಅಕ್ರಮ ಮದ್ಯಸಾರ ಸಾಗಾಣಿಕೆಗಾಗಿಯೇ ನಿರ್ಮಿಸಿದ್ದು, ಈ ರೀತಿಯ ಗುರುತರವಾದ ಅಳವಡಿಕೆ ವಾಹನ ಮಾಲೀಕರ ತಿಳುವಳಿಕೆಯಿಂದಲೇ ಹಾಗೂ ಅವರೇ ಗುಪ್ತ ಟ್ಯಾಂಕನ್ನು ನಿರ್ಮಿಸಿರುತ್ತಾರೆ ಎಂದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗುತ್ತದೆ. ಅಲ್ಲದೆ ಈ ಗುಪ್ತ ಟ್ಯಾಂಕ್‌ನಲ್ಲಿ ಅಕ್ರಮ ಮದ್ಯಸಾರ ಸಾಗಾಣಿಕೆಯಾಗಿರುವುದು ಆ ಸಮಯದಲ್ಲಿ ಲಾರಿಯ ಚಾಲಕನು ತನ್ನ ಸಹಾಯಕನೊಂದಿಗೆ ತಲೆಮರೆಸಿಕೊಂಡಿರುವುದು ಈ ಅಕ್ರಮ ಕೃತ್ಯಕ್ಕೆ ಪುಷ್ಟಿ ನೀಡುತ್ತದೆ. ಹಾಗೂ ಈ ಅಕ್ರಮ ಮದ್ಯಸಾರ ಸಾಗಾಣಿಕೆಯು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಈ ಕಾರಣದಿಂದ ಎರಡನೇ ವಿವಾದವನ್ನು ನಕಾರಾತ್ಮಕವಾಗಿ ಉತ್ತರಿಸಿರುತ್ತೇನೆ.

ಈ ಪ್ರಕರಣದಲ್ಲಿ 1965ನೇ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 54 ರಡಿಯಲ್ಲಿ ನ್ಯಾಯಾಲಯದಿಂದ ಸರ್ಚ್ ವಾರಂಟ್ ಪಡೆದಿರುವುದಿಲ್ಲ, ಹಾಗೂ ಪಡೆಯದಿರುವುದಕ್ಕೆ ಕಾರಣಗಳನ್ನು ನಮೂದಿಸಿ ಸರ್ಚ್ ಮೆಮೋವನ್ನು ತಯಾರಿಸಿರುವುದಿಲ್ಲ. ಈ ಕ್ರಮವನ್ನು ಕೈಗೊಳ್ಳದೇ ಇದ್ದ ಕಾರಣಕ್ಕಾಗಿ ಅಬಕಾರಿ ವಸ್ತುಗಳನ್ನು ವಶಪಡಿಸಿಕೊಂಡಿರುವುದು ಕಾನೂನು ಬಾಹಿರವಾಗುವುದಿಲ್ಲ. ಈ ಕುರಿತು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ತೀರ್ಪನ್ನು ಉಲ್ಲೇಖಿಸಬಹುದಾಗಿದೆ. ಐ.ಎಲ್.ಆರ್-2004 ಕರ್ನಾಟಕ 527 ರಲ್ಲಿ ವರದಿಯಾದ "ಪ್ರಕರಣ" ಸೋಮನಾಥ ಕೆರೆಬೈಲ್ ವಿರುದ್ಧ ಸರ್ಕಾರ ಅಬಕಾರಿ ಉಪ ಆಯುಕ್ತರು, ಬೆಳಗಾಂ ಜಿಲ್ಲೆ ಈ ಪ್ರಕರಣದಲ್ಲಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ ಅಬಕಾರಿ ಕಾಯ್ದೆ ಕಲಂ 54ರ ಅಡಿಯ ಪ್ರಕ್ರಿಯೆಯನ್ನು ಅನುಸರಿಸುವಲ್ಲಿ ಅಧಿಕಾರಿಗಳು ವಿಫಲವಾದರೂ, ಕರ್ನಾಟಕ ಅಬಕಾರಿ ಕಾಯ್ದೆ ಕಲಂ 54 ನ್ನು ಅನುಸರಣೆ ಮಾಡದ ಕಾರಣಕ್ಕಾಗಿ ಅಕ್ರಮ ವಸ್ತುಗಳನ್ನು ವಶಪಡಿಸಿಕೊಳ್ಳಲು ಅನುಸರಿಸುವ ಕ್ರಮವು ಕಾನೂನು ಬಾಹಿರವಾಗುವುದಿಲ್ಲ ಎಂಬುದನ್ನು ಸ್ಪಷ್ಟವಾಗಿ ವ್ಯಕ್ತಪಡಿಸುತ್ತದೆ. ಈ ಮೇಲೆ ವ್ಯಕ್ತಪಡಿಸಿರುವ ಅಭಿಪ್ರಾಯದಂತೆ ಪ್ರಸ್ತುತ ಪ್ರಕರಣದಲ್ಲಿ ಕಲಂ. 54ರ ಪ್ರಕ್ರಿಯೆಯನ್ನು ಅನುಸರಣೆ ಮಾಡದೇ ಇದ್ದರೂ ಜಪ್ತಿ ಪಡಿಸಲಾಗಿರುವ ವಾಹನದಲ್ಲಿ ಅಕ್ರಮವಾಗಿ ಮದ್ಯಸಾರ ಸಾಗಾಣಿಕೆಯಾಗಿರುತ್ತದೆ ಎಂದು ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಗಳು ರುಜುವಾತುಪಡಿಸಿದಲ್ಲಿ ಜಪ್ತಿಗೊಳಿಸಿರುವ ವಾಹನ ಕಾನೂನು ಬಾಹಿರವಾಗುವುದಿಲ್ಲ ಹಾಗೂ ಮುಟ್ಟುಗೋಲು ಪ್ರಕರಣಕ್ಕೆ ಯಾವುದೇ ರೀತಿಯ ಧಕ್ಕೆಯುಂಟಾಗುವುದಿಲ್ಲ.

ಈ ಮೇಲ್ಕಾಣಿಸಿದ ಕಾರಣಗಳಿಂದ ಸದರಿ ಪ್ರಕರಣದಲ್ಲಿ ಜಪ್ತಿಪಡಿಸಲಾಗಿರುವ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತವೆಂದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ: 801:ಡಿಟಿಸಿಆರ್:1998-99, ದಿನಾಂಕ: 20ನೇ ಮೇ 2004**

ಗೋವಿಂದಪ್ಪ ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43 (ಎ)ಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಪೊಲೀಸ್ ಉಪ ನಿರೀಕ್ಷಕರು, ಉಳ್ಳಾಲ ಪೊಲೀಸ್ ಠಾಣೆ, ಇವರ ಮೊಕದ್ದಮೆ ಸಂಖ್ಯೆ: 2/99 ದಿನಾಂಕ:10-1-99ರಲ್ಲಿ ವಶಪಡಿಸಿಕೊಂಡಿರುವ ಲಾರಿ ಸಂ: ಕೆಎಲ್-7 ಜೆ-4669ನ್ನು ನಿಯಮ 43ಎ (2) ರನ್ವಯ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿ: 20-5-2004 ರಂದು ಶೀಘ್ರಲಿಪಿಗಾರರಿಗೆ ಉತ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ - 1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ.:1 - ಶ್ರೀ ಬಿ.ಪಿ. ಪುರಂದರ ಗೌಡ, ಆರಕ್ಷಕ, ಉಳ್ಳಾಲ ಆರಕ್ಷಕ ಪೊಲೀಸ್ ಠಾಣೆ, ಉಳ್ಳಾಲ.

ಪ್ರಾ.ಸಾ.:2 - ಶ್ರೀ ಕೆ. ವೆಂಕಪ್ಪ ಶೆಟ್ಟಿ, ಹೆ ಸಿ.ಪಿ., ಉಳ್ಳಾಲ ಆರಕ್ಷಕ ಪೊಲೀಸ್ ಠಾಣೆ, ಉಳ್ಳಾಲ.

ಪ್ರಾ.ಸಾ.: - ಶ್ರೀ ಎಂ. ಸುಂದರ, ಸಹಾಯಕ ಉಪ ಆರಕ್ಷಕರು, ಉಳ್ಳಾಲ ಆರಕ್ಷಕ ಪೊಲೀಸ್ ಠಾಣೆ, ಉಳ್ಳಾಲ.

ಪ್ರಾ.ಸಾ.:4 - ಶ್ರೀ ಯು.ರಾಮ, ಅಬಕಾರಿ ರಕ್ಷಕ, ಉಳ್ಳಾಲ ವಲಯ, ಉಳ್ಳಾಲ.

ಪ್ರಾ.ಸಾ.:5 - ಶ್ರೀ ಯಶವಂತ ಕುಮಾರ್, ನಿವೃತ್ತ ಅಬಕಾರಿ ನಿರೀಕ್ಷಕರು, ಉಳ್ಳಾಲ ವಲಯ, ಉಳ್ಳಾಲ.

**ಅನುಬಂಧ - 2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ-1 - ಪಂಚನಾಮೆ ಪ್ರತಿ.

ನಿಶಾನೆ ಪಿ-2 - ಆರಕ್ಷಕ ಉಪ ನಿರೀಕ್ಷಕರಿಗೆ ಸಲ್ಲಿಸಿದ ವರದಿ.

ನಿಶಾನೆ ಪಿ-3 - ಪ್ರಥಮ ಮಾಹಿತಿ ವರದಿಯ ಪ್ರತಿ.

ನಿಶಾನೆ ಪಿ-4 - ರಾಸಾಯನಿಕ ವಿಶ್ಲೇಷಕರ ವರದಿ ಪ್ರತಿ.

**ಅನುಬಂಧ - 3**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:**

**ಅರ್ಜಿದಾರರ ಹೇಳಿಕೆ:**

ಡಿ.ಡಬ್ಲ್ಯೂ-1:- ಶ್ರೀ ಡಾ.ಎಸ್. ಸುಧಾಕರನ್ ರಾವ್, ಬಿನ್: ಸರ್ವೋತ್ತಮ ರಾವ್, ವಲ್ಲಿಪರಂಬಿಲ್ ಹೌಸ್, ಕೇರಳ ರಾಜ್ಯ.

**ಅನುಬಂಧ - 4**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು:

1) ಡಿ-1 - ಮಲಯಾಳಿ ಭಾಷೆಯಲ್ಲಿ ಬರೆದ ಪತ್ರ.
2) ಡಿ-2 - ಮಲಯಾಳಿ ಭಾಷೆಯಲ್ಲಿ ಬರೆದ ಪತ್ರವನ್ನು ಇಂಗ್ಲೀಷ್‌ನಲ್ಲಿ ತರ್ಜುಮೆ ಮಾಡಿದ ಪ್ರತಿ.
3) ಡಿ-3 - ಸಾರಿಗೆ ಅಧಿಕಾರಿಗಳು ವಾಹನದ ನೋಂದಣಿ ಪತ್ರದ ದೃಢೀಕೃತ ನಕಲು ಪ್ರತಿ.
4) ಡಿ-4 - ದುಗಾರ್ ಫೈನಾನ್ಸ್‌ಗೆ ನೀಡಿದ ಕಂತುಬಾಕಿ ಪತ್ರ.

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್. 874

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ**

**ಸಂಖ್ಯೆ.21/ಸಂವಿ/ಸಿ.ಓ.ಪಿ/2004, ದಿನಾಂಕ: 3ನೇ ಜೂನ್, 2004**

ಬೆಂಗಳೂರು ನಗರ, ಕಮರ್ಷಿಯಲ್ ಸ್ಟ್ರೀಟ್ ಸಂಚಾರ ವಲಯದ ವ್ಯಾಪ್ತಿಯಲ್ಲಿರುವ ಡಿಸ್ಪೆನ್ಸರಿ ರಸ್ತೆ, ಕಾಮರಾಜ ರಸ್ತೆ, ಡಿಕನ್‌ಸನ್ ರಸ್ತೆ, ಮೈನ್‌ಗಾರ್ಡ್ ರಸ್ತೆ ಹಾಗೂ ಇತರೆ ಅಡ್ಡರಸ್ತೆಗಳಲ್ಲಿ ಎರಡೂ ಬದಿಗಳಲ್ಲೂ ವಾಣಿಜ್ಯ ಮಳಿಗೆಗಳು, ಸರ್ಕಾರಿ ಕಛೇರಿಗಳು, ಹಾಗೂ ಇತರೆ ಸರ್ಕಾರೇತರ ಕಛೇರಿಗಳಿರುವುದರಿಂದ ವಾಹನ ಸಂಚಾರ ಅಧಿಕಗೊಂಡು ಸುಗಮ ಸಂಚಾರಕ್ಕೆ ಅಡ್ಡಿ ಉಂಟಾಗುತ್ತಿರುವುದು ಮತ್ತು ವಾಹನ ಸಂಚಾರದಲ್ಲಿ ನಿಧಾನಗತಿ ಉಂಟಾಗಿರುವುದು ಹಾಗೂ ಅಪಘಾತಗಳು ಸಂಭವಿಸುತ್ತಿರುವುದು ಕಂಡು ಬಂದಿರುತ್ತದೆ. ಈ ರಸ್ತೆಗಳಲ್ಲಿ ವಾಹನಗಳ ಸುಗಮ ಸಂಚಾರಕ್ಕೆ ಅನುಕೂಲವಾಗುವಂತೆ ಹಾಗೂ ವಾಹನಗಳ ಅಪಘಾತಗಳನ್ನು ತಪ್ಪಿಸುವ ಸಲುವಾಗಿ ಡಿಸ್ಪೆನ್ಸರಿ ರಸ್ತೆ, ಮೈನ್‌ಗಾರ್ಡ್ ಕ್ರಾಸ್ ರಸ್ತೆಗಳನ್ನು ಸಾರ್ವಜನಿಕ ಹಿತಾಸಕ್ತಿ ಗಮನಿಸಿ ಹಾಲಿ ಇರುವ ದ್ವಿಮುಖ ಸಂಚಾರ ವ್ಯವಸ್ಥೆಯನ್ನು ನಿರ್ಬಂಧಿಸಿ ಏಕ ಮುಖ ಸಂಚಾರ ವ್ಯವಸ್ಥೆಯನ್ನು ಜಾರಿಗೊಳಿಸುವುದು ಹಾಗೂ ಇತರೆ ಸಂಚಾರ ಮಾರ್ಪಾಡುಗಳನ್ನು ಮಾಡುವುದು ಅವಶ್ಯಕವೆಂದು ಕಂಡು ಬಂದಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧನೆಗಳನ್ನು ಆದೇಶಿಸಿರುತ್ತೇನೆ.

1. **ಡಿಸ್ಪೆನ್ಸರಿ ರಸ್ತೆ & ಮೈನ್ ಗಾರ್ಡ್ ಕ್ರಾಸ್ ರಸ್ತೆ :** ಹಾಲಿ ಡಿಸ್ಪೆನ್ಸರಿ ರಸ್ತೆಯಲ್ಲಿ ಓ.ಪಿ.ಹೆಚ್. ರಸ್ತೆಯಿಂದ ಆಲೀಸ್ ಜಂಕ್ಷನ್‌ವರೆಗೆ ಏಕಮುಖ ಸಂಚಾರ ವ್ಯವಸ್ಥೆ ಜಾಯಲ್ಲಿರುತ್ತೆ. ಆಲೀಸ್ ಜ್ಯೂಯಲರ್ಸ್ ಜಂಕ್ಷನ್‌ನಿಂದ ಕಾಮರಾಜ ರಸ್ತೆ ಮತ್ತು ಡಿಕನ್‌ಸನ್ ರಸ್ತೆ ಜಂಕ್ಷನ್‌ವರೆಗೆ ಪಶ್ಚಿಮದಿಂದ ಪೂರ್ವಕ್ಕೆ ಎಲ್ಲಾ ತರಹದ ವಾಹನಗಳ ಸಂಚಾರಕ್ಕೆ ಅವಕಾಶ ಮಾಡಿಕೊಟ್ಟು ಪೂರ್ವದಿಂದ ಪಶ್ಚಿಮದ ಕಡೆಗೆ ಅಂದರೆ ಕಾಮರಾಜ ರಸ್ತೆ ಮತ್ತು ಡಿಕನ್‌ಸನ್ ರಸ್ತೆ ಜಂಕ್ಷನ್‌ನಿಂದ ಆಲೀಸ್ ಜ್ಯೂವೆಲರಿ ವೃತ್ತದವರೆಗೆ ಹಾಗೂ ಮುಂದಕ್ಕೆ ಮೈನ್ ಗಾರ್ಡ್ ಕ್ರಾಸ್ ರಸ್ತೆಯಲ್ಲಿ ಆಸ್ಪತ್ರೆ ರಸ್ತೆ ಮತ್ತು ಕಬ್ಬನ್ ರಸ್ತೆಗೆ ಹೋಗುವ ವಾಹನಗಳ ಸಂಚಾರವನ್ನು ನಿಷೇಧಿಸಿದೆ. ಏಕಮುಖ ಸಂಚಾರವು ಇನ್‌ಫೆಂಟ್ರಿ ರಸ್ತೆ ಹಾಗೂ ಮೈನ್‌ಗಾರ್ಡ್ ಕ್ರಾಸ್ ರಸ್ತೆ ಸೇರುವ ಜಂಕ್ಷನ್‌ವರೆಗೆ ಮಾತ್ರ ಸೀಮಿತವಾಗಿರುತ್ತದೆ.
2. ಕಮರ್ಷಿಯಲ್ ಸ್ಟ್ರೀಟ್‌ನಿಂದ ನಾರಾಯಣಪಿಳ್ಳೈ ಸ್ಟ್ರೀಟ್ ಮುಖಾಂತರ ಬಂದ ವಾಹನಗಳು ಕಡ್ಡಾಯವಾಗಿ ಎಡ ತಿರುವು ಪಡೆದು ಡಿಸ್ಪೆನ್ಸರಿ ರಸ್ತೆ ಮೂಲಕ ಸಂಚರಿಸಿ ಮುಂದಕ್ಕೆ ಡಿಕನ್‌ಸನ್ ರಸ್ತೆ ಅಥವಾ ಕಾಮರಾಜ ರಸ್ತೆ ಕಡೆಗೆ ಹೋಗಲು ಅವಕಾಶ ಕಲ್ಪಿಸಿಕೊಡಲಾಗಿದೆ. ಅದೇ ರೀತಿ ಡಿಕನ್‌ಸನ್ ರಸ್ತೆಯಿಂದ ಬಂದ ವಾಹನಗಳು ಕಾಮರಾಜ ರಸ್ತೆ ಮತ್ತು ಡಿಸ್ಪೆನ್ಸರಿ

ರಸ್ತೆ ಜಂಕ್ಷನ್‌ನಲ್ಲಿ ಕಾಮರಾಜ ರಸ್ತೆಯನ್ನು ಬಳಸಿಕೊಂಡು ಎಡ ಅಥವಾ ಬಲ ತಿರುವು ಪಡೆದು ಸಂಚರಿಸಲು ಅವಕಾಶ ಕಲ್ಪಿಸಿಕೊಡಲಾಗಿದೆ.

3. ಡಿಕನ್‌ಸನ್ ರಸ್ತೆಯಿಂದ ಬಂದಂತಹ ವಾಹನಗಳು ಆಸ್ಪತ್ರೆ ರಸ್ತೆಯನ್ನು ಉಪಯೋಗಿಸಬೇಕಾದ ಸಂದರ್ಭದಲ್ಲಿ ಅಂತಹ ವಾಹನ ಚಾಲಕರು ಕಾಮರಾಜ ರಸ್ತೆ ಮತ್ತು ಡಿಸ್ಪೆನ್ಸರಿ ರಸ್ತೆ ವೃತ್ತದಲ್ಲಿ ಕಡ್ಡಾಯ ಎಡ ತಿರುವು ಪಡೆದು ಕಾಮರಾಜ ರಸ್ತೆಯಲ್ಲಿ ಸಾಗಿ ಕಾಮರಾಜ ರಸ್ತೆ ಮತ್ತು ಕಬ್ಬನ್ ರಸ್ತೆ ವೃತ್ತದಲ್ಲಿ ಈಗ ಹೊಸದಾಗಿ ಸೃಷ್ಟಿಸಿರುವ ಬಲ ತಿರುವು ಪಡೆದು ಮೈನ್ ಗಾರ್ಡ್ ಕ್ರಾಸ್ ರಸ್ತೆ ಮುಖಾಂತರ ಚಲಿಸಿ ಆಸ್ಪತ್ರೆ ರಸ್ತೆ ಸೇರಲು ಅವಕಾಶ ಕಲ್ಪಿಸಿಕೊಡಲಾಗಿದೆ.

4. ಓ.ಪಿ.ಹೆಚ್ ರಸ್ತೆಯಿಂದ ಬಂದ ವಾಹನಗಳು ಡಿಸ್ಪೆನ್ಸರಿ ರಸ್ತೆಯಲ್ಲಿ ಸಂಚರಿಸಿ ಆಲೀಸ್ ಜ್ಯೂವೆಲರಿ ವೃತ್ತದಲ್ಲಿ ಬಲ ತಿರುವು ಪಡೆಯುವುದನ್ನು ನಿಷೇಧಿಸಲಾಗಿದೆ. ಅಂತಹ ವಾಹನಗಳು ನೇರವಾಗಿ ಡಿಸ್ಪೆನ್ಸರಿ ರಸ್ತೆಯಲ್ಲಿ ಸಾಗಿ ಕಾಮರಾಜ ರಸ್ತೆ ಮತ್ತು ಡಿಸ್ಪೆನ್ಸರಿ ವೃತ್ತದಲ್ಲಿ ಬಲ ತಿರುವು ಪಡೆದು ಮುಂದಕ್ಕೆ ಚಲಿಸಲು ಅವಕಾಶವನ್ನು ಕಲ್ಪಿಸಿಕೊಡಲಾಗಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸಹ ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 07-06-2004 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ:03-06-2004 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

ಎಸ್. ಮರಿಸ್ವಾಮಿ

ಪಿ.ಆರ್. 875 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ**

**ಸಂಖ್ಯೆ.20/ಸಂವಿ/ಸಿ.ಓ.ಪಿ/2004, ದಿನಾಂಕ: 3ನೇ ಜೂನ್, 2004**

ಬೆಂಗಳೂರು ನಗರ, ಅಶೋಕನಗರ ಸಂಚಾರ ವಲಯದ ವ್ಯಾಪ್ತಿಯಲ್ಲಿರುವ ಕಮೀಸರಿಯೇಟ್ ರಸ್ತೆ ಮತ್ತು ಪ್ರಿಮ್‌ರೋಸ್ ರಸ್ತೆಯ ಎರಡೂ ಬದಿಗಳಲ್ಲೂ ವಾಣಿಜ್ಯ ಮಳಿಗೆಗಳು, ಸರ್ಕಾರಿ ಕಛೇರಿಗಳು, ಹಾಗೂ ಇತರೆ ಸರ್ಕಾರೇತರ ಕಛೇರಿಗಳಿರುವುದರಿಂದ ವಾಹನ ಸಂಚಾರ ಅಧಿಕಗೊಂಡು ಸುಗಮ ಸಂಚಾರಕ್ಕೆ ಅಡ್ಡಿ ಉಂಟಾಗುತ್ತಿರುವುದು ಮತ್ತು ವಾಹನ ಸಂಚಾರದಲ್ಲಿ ನಿಧಾನಗತಿ ಉಂಟಾಗಿರುವುದು ಹಾಗೂ ಅಪಘಾತಗಳು ಸಂಭವಿಸುತ್ತಿರುವುದು ಕಂಡು ಬಂದಿರುತ್ತದೆ. ಈ ರಸ್ತೆಗಳಲ್ಲಿ ವಾಹನಗಳ ಸುಗಮ ಸಂಚಾರಕ್ಕೆ ಅನುಕೂಲವಾಗುವಂತೆ ಹಾಗೂ ವಾಹನಗಳ ಅಪಘಾತಗಳನ್ನು ತಪ್ಪಿಸುವ ಸಲುವಾಗಿ ಕಮೀಸರಿಯೇಟ್ ರಸ್ತೆ ಮತ್ತು ಪ್ರಿಮ್‌ರೋಸ್ ರಸ್ತೆಗಳನ್ನು ಸಾರ್ವಜನಿಕ ಹಿತಾಸಕ್ತಿ ಗಮನಿಸಿ ಹಾಲಿ ಇರುವ ದ್ವಿಮುಖ ಸಂಚಾರ ವ್ಯವಸ್ಥೆಯನ್ನು ನಿರ್ಬಂಧಿಸಿ ಏಕ ಮುಖ ಸಂಚಾರ ವ್ಯವಸ್ಥೆಯನ್ನು ಜಾರಿಗೊಳಿಸುವುದು ಹಾಗೂ ಇತರೆ ಸಂಚಾರ ಮಾರ್ಪಾಡುಗಳನ್ನು ಮಾಡುವುದು ಅವಶ್ಯಕವೆಂದು ಕಂಡು ಬಂದಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧನೆಗಳನ್ನು ಆದೇಶಿಸಿರುತ್ತೇನೆ.

1. **ಕಮೀಸರಿಯೇಟ್ ರಸ್ತೆ:-** ಕಮೀಸರಿಯೇಟ್ ರಸ್ತೆಯಲ್ಲಿ ಮೇಯೋಹಾಲ್ ಕಡೆಯಿಂದ ಶಾಪರ್ಸ್ ಸ್ಟಾಪ್‌ವರೆಗಿನ ಸಂಚಾರವನ್ನು ಯಥಾಸ್ಥಿತಿಯಲ್ಲಿ ಉಳಿಸಿಕೊಂಡು ಶಾಪರ್ಸ್ ಸ್ಟಾಪ್‌ನಿಂದ ಮೇಯೋಹಾಲ್ ಕಡೆಗೆ ಸಂಚರಿಸುವ ಎಲ್ಲಾ ವಾಹನಗಳ ಸಂಚಾರವನ್ನು ನಿಷೇಧಿಸಲಾಗಿದೆ. ಹಾಗೂ ಈ ರಸ್ತೆಯಲ್ಲಿ ಎರಡೂ ಬದಿಯಲ್ಲಿ ವಾಹನ ನಿಲುಗಡೆಯನ್ನು ನಿಷೇಧಿಸಲಾಗಿದೆ.

2. ಡಿಸೋಜ ವೃತ್ತದಿಂದ ಬರುವ ವಾಹನಗಳು ಮೇಯೋ ಹಾಲ್ ಕಡೆಗೆ (ರೆಸಿಡೆನ್ಸಿ ರಸ್ತೆ) ಹೋಗಲು ಶಾಪರ್ಸ್ ಸ್ಟಾಪ್ ಜಂಕ್ಷನ್‌ನಲ್ಲಿ ಎಡ ತಿರುವು ಪಡೆದು ಮಗರತ್ ರಸ್ತೆಯಲ್ಲಿ ಸಂಚರಿಸಿ ಬ್ರಿಗೇಡ್ ರಸ್ತೆ ಮೂಲಕ ಹೋಗುವ ಅವಕಾಶವನ್ನು ಕಲ್ಪಿಸಿಕೊಡಲಾಗಿದೆ. ಅಲ್ಲದೆ ಶಾಪರ್ಸ್ ಸ್ಟಾಪ್ ಜಂಕ್ಷನ್‌ನಲ್ಲಿ ಬಲ ತಿರುವು ಪಡೆದು ಮಗರತ್ ರಸ್ತೆಯಲ್ಲಿ ಸಂಚರಿಸಿ ಪ್ರಿಮ್‌ರೋಸ್ ರಸ್ತೆ ಮೂಲಕ ಎಂ.ಜಿ. ರಸ್ತೆಯನ್ನು ಹಾಗೂ ಹಾಸ್ಮ್ಯಾಟ್ ಆಸ್ಪತ್ರೆ ಕಡೆಗೆ ಸೇರುವ ಅವಕಾಶವನ್ನು ಕಲ್ಪಿಸಿಕೊಡಲಾಗಿದೆ.

3. **ಪ್ರಿಮ್‌ರೋಸ್ ರಸ್ತೆ:-** ಪ್ರಿಮ್‌ರೋಸ್ ರಸ್ತೆಯಲ್ಲಿ ಪೊಲೀಸ್ ಆಫೀಸರ್ಸ್ ಮೆಸ್ ಜಂಕ್ಷನ್‌ನಿಂದ ಎಂ.ಜಿ. ರಸ್ತೆಗೆ ಹಾಲಿ ಇರುವ ಸಂಚಾರ ವ್ಯವಸ್ಥೆಯನ್ನು ಯಥಾಸ್ಥಿತಿ ಉಳಿಸಿಕೊಂಡು ಎಂ.ಜಿ. ರಸ್ತೆಯಿಂದ ಪೊಲೀಸ್ ಆಫೀಸರ್ಸ್ ಮೆಸ್ ಜಂಕ್ಷನ್ ಕಡೆಗೆ ಸಂಚರಿಸುವ ಎಲ್ಲಾ ವಾಹನಗಳ ಸಂಚಾರವನ್ನು ನಿಷೇಧಿಸಲಾಗಿದೆ. ಈ ರಸ್ತೆಯಲ್ಲಿ ಎರಡೂ ಬದಿಯಲ್ಲಿ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ.

4. **ಮಗರತ್ ರಸ್ತೆಯಲ್ಲಿ** ಬ್ರಿಗೇಡ್ ರಸ್ತೆ ಜಂಕ್ಷನ್‌ನಿಂದ ಪೊಲೀಸ್ ಆಫೀಸರ್ಸ್ ಮೆಸ್ ವರೆಗೆ ಎರಡೂ ಬದಿಗಳಲ್ಲಿ ವಾಹನ ನಿಲುಗಡೆಯನ್ನು ನಿಷೇಧಿಸಲಾಗಿದೆ. ಶಾಪರ್ಸ್ ಸ್ಟಾಪ್ ಮುಂಭಾಗ ಇರುವ ವಿಶಾಲವಾದ ಫುಟ್‌ಪಾತ್‌ನಲ್ಲಿ ಸಾರ್ವಜನಿಕರ ಅನುಕೂಲಕ್ಕಾಗಿ ಆರು ಆಟೋ ರಿಕ್ಷಾಗಳ ನಿಲುಗಡೆಗೆ ಮಾತ್ರ ಅವಕಾಶವನ್ನು ಕಲ್ಪಿಸಿಕೊಡಲಾಗಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸಹ ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 07-06-2004 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ:03-06-2004 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**

ಪಿ.ಆರ್. 876 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ**

**ಸಂಖ್ಯೆ.13/ಸಂವಿ/ಸಿ.ಓ.ಪಿ/2004, ದಿನಾಂಕ: 9ನೇ ಜೂನ್, 2004**

ಬೆಂಗಳೂರು ನಗರದ ಶೇಷಾದ್ರಿ ರಸ್ತೆ, ಕೆಂಪೇಗೌಡ ರಸ್ತೆ, ಪ್ಯಾಲೇಸ್ ರಸ್ತೆ, ಹಳೇ ಪೋಸ್ಟ್ ಆಫೀಸ್ ರಸ್ತೆ, ನೃಪತುಂಗ ರಸ್ತೆಗಳಲ್ಲಿ ಸುಗಮ ಸಂಚಾರದ ದೃಷ್ಟಿಯಿಂದ ಏಕಮುಖ ಸಂಚಾರ ವ್ಯವಸ್ಥೆಯನ್ನು ಹಾಗೂ ಕೆಲವು ಸಂಚಾರ ಮಾರ್ಪಾಡುಗಳನ್ನು 01-05-2004 ರಿಂದ ಪ್ರಾಯೋಗಿಕವಾಗಿ ಒಂದು ತಿಂಗಳ ಕಾಲ ಜಾರಿಯಲ್ಲಿರುವಂತೆ ಆದೇಶ ಹೊರಡಿಸಿರುತ್ತೇನೆ.

ಬೆಂಗಳೂರು ನಗರದಲ್ಲಿ ಇತ್ತೀಚಿಗೆ ಅತಿ ಹೆಚ್ಚಿನ ಸಂಚಾರ ಒತ್ತಡವಿದ್ದು ಆಗಿಂದಾಗ್ಗೆ ವಾಹನ ಚಾಲಕರಿಗೆ ಅನಾನುಕೂಲವಾಗಿ ಕಂಡಿದ್ದು ತುರ್ತಾಗಿ ಸುಗಮ ಸಂಚಾರಕ್ಕೋಸ್ಕರ ಪರಿಹಾರವನ್ನು ಕಂಡುಕೊಳ್ಳಲು ಅಗತ್ಯ ಕ್ರಮಗಳನ್ನು ಕೈಗೊಳ್ಳಲಾಯ್ತು. ಹಾಗೂ ಮೇಲ್ಸೇತುವೆ ನಿರ್ಮಾಣ, ವರ್ತುಲ ರಸ್ತೆ ನಿರ್ಮಾಣಕ್ಕೆ ಅಧಿಕ ವೆಚ್ಚವಾಗುವುದರ ಜೊತೆಗೆ ಹೆಚ್ಚಿನ ಕಾಲ ತೆಗೆದುಕೊಳ್ಳಲಿದ್ದು ಈ ನಿಟ್ಟಿನಲ್ಲಿ ತಕ್ಷಣ ಸುಗಮ ಸಂಚಾರಕ್ಕಾಗಿ ಕೆಲವು ರಸ್ತೆಗಳಲ್ಲಿ ತಾತ್ಕಾಲಿಕವಾಗಿ ಏಕ ಮುಖ ಸಂಚಾರ ವ್ಯವಸ್ಥೆಯನ್ನು ಜಾರಿಗೆ ತರುವುದು ಅವಶ್ಯಕವಾಗಿ ಕಂಡು ಬಂದಿರುತ್ತದೆ.

ಇದರ ಬಗ್ಗೆ ತಜ್ಞರ ಹಾಗೂ ವಿವಿಧ ಸಂಸ್ಥೆಗಳ ಅಭಿಪ್ರಾಯವನ್ನು ಪಡೆದು ವಾಹನ ಸಂಚಾರ ದಟ್ಟಣೆಯನ್ನು ಕಡಿಮೆಗೊಳಿಸಲು ಹಾಗೂ ಸುಗಮ ಸಂಚಾರಕ್ಕಾಗಿ, ಅಪಘಾತಗಳ ನಿಯಂತ್ರಣ ಸಲುವಾಗಿ ಹಾಗೂ ವಾಯು ಮಾಲಿನ್ಯವನ್ನು ತಡೆಗಟ್ಟುವ ಸಲುವಾಗಿ ಈ ಮೇಲ್ಕಂಡ ರಸ್ತೆಗಳಲ್ಲಿ ಏಕಮುಖ ಸಂಚಾರದ ವ್ಯವಸ್ಥೆಯನ್ನು ದಿನಾಂಕ: 01-05-2004 ರಿಂದ ಒಂದು ತಿಂಗಳ ಕಾಲ ಪ್ರಾಯೋಗಿಕವಾಗಿ ಜಾರಿಯಲ್ಲಿ ಬರುವಂತೆ ಹೊರಡಿಸಿದ್ದ ಆದೇಶವನ್ನು ಮುಂದುವರಿಸುವುದು ಅವಶ್ಯಕವಾಗಿ ಕಂಡು ಬಂದಿರುತ್ತದೆ.

ಆದ್ದರಿಂದ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧನೆಗಳನ್ನು ಆದೇಶಿಸಿರುತ್ತೇನೆ.

1. **ಕೆಂಪೇಗೌಡ ರಸ್ತೆ:-** ಕೆಂಪೇಗೌಡ ರಸ್ತೆಯಲ್ಲಿ ಪೊಲೀಸ್ ಕಾರ್ನರ್ ವೃತ್ತದಿಂದ ಮೈಸೂರು ಬ್ಯಾಂಕ್ ವೃತ್ತದವರೆವಿಗೆ ಪೂರ್ವದಿಂದ ಪಶ್ಚಿಮಕ್ಕೆ ಹಾಲಿ ಇರುವ ಸಂಚಾರ ವ್ಯವಸ್ಥೆಯನ್ನು ಯಥಾಸ್ಥಿತಿಯಲ್ಲಿ ಉಳಿಸಿಕೊಂಡು ಮೈಸೂರ್ ಬ್ಯಾಂಕ್ ವೃತ್ತದಿಂದ ಪೊಲೀಸ್ ಕಾರ್ನರ್ ವೃತ್ತದ ಕಡೆಗೆ ಪಶ್ಚಿಮದಿಂದ ಪೂರ್ವಕ್ಕೆ ಸಂಚರಿಸುವ ಎಲ್ಲಾ ವಾಹನಗಳ ಸಂಚಾರವನ್ನು ನಿಷೇಧಿಸಲಾಗಿದೆ.
2. **ಶೇಷಾದ್ರಿ ರಸ್ತೆ:** ಶೇಷಾದ್ರಿ ರಸ್ತೆಯಲ್ಲಿ ಆನಂದರಾವ್ ವೃತ್ತದಿಂದ ಮಹಾರಾಣಿ ಕಾಲೇಜ್ ವೃತ್ತದವರೆಗೆ ಇರುವ ಏಕಮುಖ ಸಂಚಾರ ವ್ಯವಸ್ಥೆಯನ್ನು ಕೆ.ಆರ್. ವೃತ್ತದವರೆಗೆ ವಿಸ್ತರಿಸಿ ಹಾಲಿ ಕೆ.ಆರ್. ವೃತ್ತದಿಂದ ಮಹಾರಾಣಿ ಕಾಲೇಜ್ ವೃತ್ತದ ಕಡೆಗೆ ಸಂಚರಿಸುವ ಎಲ್ಲಾ ವಿಧದ ವಾಹನ ಸಂಚಾರವನ್ನು ನಿಷೇಧಿಸಲಾಗಿದೆ.
3. **ಪ್ಯಾಲೇಸ್ ರಸ್ತೆ:** ಮಹಾರಾಣಿ ಕಾಲೇಜ್ ವೃತ್ತದಿಂದ ಮೈಸೂರ್ ಬ್ಯಾಂಕ್ ವೃತ್ತದವರೆವಿಗೆ ಅಂದರೆ ಉತ್ತರದಿಂದ ದಕ್ಷಿಣಕ್ಕೆ ಸಂಚರಿಸುವ ಎಲ್ಲಾ ವಾಹನಗಳ ಸಂಚಾರವನ್ನು ನಿಷೇಧಿಸಿ ಮೈಸೂರ್ ಬ್ಯಾಂಕ್ ವೃತ್ತದಿಂದ ಮಹಾರಾಣಿ ಕಾಲೇಜ್ ವೃತ್ತದವರೆಗೆ ವಾಹನಗಳ ಸಂಚಾರಕ್ಕೆ ಅನುವು ಮಾಡಿಕೊಡಲಾಗಿದೆ.
4. **ಹಳೇ ಪೋಸ್ಟ್ ಆಫೀಸ್ ರಸ್ತೆ:** ಈ ರಸ್ತೆಯಲ್ಲಿ ಕೆ.ಆರ್. ವೃತ್ತದಿಂದ ಮೈಸೂರ್ ಬ್ಯಾಂಕ್ ವೃತ್ತದವರೆಗೆ ಇರುವ ಏಕಮುಖ ಸಂಚಾರ ವ್ಯವಸ್ಥೆಯನ್ನು ರದ್ದುಪಡಿಸಿ ಎರಡೂ ಬದಿಯ ಸಂಚಾರಕ್ಕೆ ಅನುವು ಮಾಡಿಕೊಡಲಾಗಿದೆ.
5. ಕೆ.ಆರ್. ವೃತ್ತದ ಕಡೆಯಿಂದ ಪೊಲೀಸ್ ಕಾರ್ನರ್ ಕಡೆಗೆ ಬರುವ ವಾಹನಗಳು (ಬಿ.ಎಂ.ಟಿ.ಸಿ ಮತ್ತು ಕೆ.ಎಸ್.ಆರ್.ಟಿ.ಸಿ. ಬಸ್‌ಗಳು ಸೇರಿದಂತೆ) ಪೊಲೀಸ್ ಕಾರ್ನರ್‌ನಲ್ಲಿ ಮುಕ್ತ ಬಲತಿರುವನ್ನು ಪಡೆದು ಮೈಸೂರ್ ಬ್ಯಾಂಕ್ ವೃತ್ತದ ಕಡೆಗೆ ಚಲಿಸಬಹುದಾಗಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸಹ ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ಖಾಯಂ ಆಗಿ ಮುಂದುವರಿಸಲು ದಿನಾಂಕ: 10-06-2004 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ಜಾರಿಗೆ ತರಲು ಆದೇಶ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**

ಪಿ.ಆರ್. 877 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

**IN THE COURT OF COMMISSIONER FOR WORKMEN'S COMPENSATION, BIDAR**
**No: LOB/WCA/Cr-27/2004**

**APPLICANTS:** **V/S** **RESPONDENT**

Jaishree W/o Basavaraj Biradar age 30 years Occ : House hold, R/o Bajolga Tq Bhalki Dist Bidar & 3 others

1. Md. Maqbool Ahmed S/o Md. Ismail sab R/o Asaifnagar Hyderabad.
2. National Insurance Co. Ltd., Hyderabad D.M. N.I.C.Ltd., Gulbarga

**PROCLAMATION**

Smt Jaishree W/o Basawaraj Biradar R/o Bajolga Tq Bhalki Dist Bidar have/has filed application in this court claiming compensation stating that Late. Basavaraj was working as Driver under the Respondent No.I he met with an accident arising out of and during the course of employment as a result he died on:6.4.2004.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclamation, if no applications or objections are received within the specified date the court will proceeded further in the matter.

P.R. 878 Commissioner for Workmen's Compensation, Bidar.

**IN THE COURT OF COMMISSIONER FOR WORKMEN'S COMPENSATION, BIDAR**
**No: LOB/WCA/Cr-26/2004**

**APPLICANTS:** **V/S** **RESPONDENT**

Kishan S/o Ganpathi Rathod age 50 years Occ Nil R/o Village, Ghat borah Tq Humnabad Dist Bidar & 5 others.

1. M.D. Hunumanth Khandsary Sugar Factory Halgera Tq Neelanga Dist Latur.
2. Kashinath S/o Umaji Rathod R/o Vilage Sogoan Tq Bhalki Dist Bidar.

**PROCLAIMATION**

Sri Kishan F/o Sanju, R/o Village Ghatborah Tq Humnabad Dist Bidar Dist Bidar have/has filed application in this court claiming compensation stating that Late: Sanju was working as Labour under the Respondent No.I & II he met with an accident arising out of and during the course of employment as a result he died on:26.3.2003.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclamation, if no applications or objections are received within the specified date the court will proceeded further in the matter.

P.R. 879 Commissioner for Workmen's Compensation, Bidar.

**IN THE COURT OF COMMISSIONER FOR WORKMEN'S COMPENSATION, BIDAR**
**No: LOB/WCA/Cr-25/2004**

**APPLICANTS:** **V/S** **RESPONDENT**

Padmanibai W/o Late Gopal age 28 years Occ House Hold R/o Ganeshpur Tq Aurad Dist Bidar & 5 Others.

1. Abdul Khadar S/o Abdul Hameed Age: Major, H.No. 32-16 Zaheerabad
2. National Insurance Co. Ltd., Gulbarga

**PROCLAMATION**

Smt Padmanibai W/o Gopal R/o Ganesh pur Tq Aurad Dist Bidar have/has filed application in this court claiming compensation stating that Late: Gopal was working as Driver under the Respondent No.I he met with an accident arising out of and during the course of employment as a result he died on:14.1.2004.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclamation, if no applications or objections are received within the specified date the court will proceeded further in the matter.

P.R. 880 Commissioner for Workmen's Compensation, Bidar.

**ಕೃಷಿ ಮಾರಾಟ ಇಲಾಖೆ**

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ. 16, 2ನೇ ರಾಜಭವನ ರಸ್ತೆ, ಪಿ.ಬಿ. ನಂ. 5309, ಬೆಂಗಳೂರು - 560 001.**

**ಅಧಿಸೂಚನೆ ಸಂಖ್ಯೆ : ಕೃಮಾಇ:20:ನಿಯವಿ:2004, ದಿನಾಂಕ: 10ನೇ ಜೂನ್ 2004**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ (1966ರ ಕರ್ನಾಟಕ ಅಧಿನಿಯಮ 27)ರ ಪ್ರಕರಣ 6ರ ಉಪಪ್ರಕರಣ (2)ರ ಮೇರೆಗೆ ಹೊರಡಿಸಲಾದ ಅಧಿಸೂಚನೆ ಸಂಖ್ಯೆ: ಕೃಮಾಇ:412:ನಿಯವಿ:90, ದಿನಾಂಕ: 21-12-1991 (ಇನ್ನು ಮುಂದೆ ಸದರಿ ಅಧಿಸೂಚನೆ ಎಂದು ಉಲ್ಲೇಖಿಸಲಾಗಿದೆ)ರಲ್ಲಿ ಕರ್ನಾಟಕದಲ್ಲಿನ ಕೃಷಿ ಮಾರಾಟ ನಿರ್ದೇಶಕರು, ಬೆಂಗಳೂರು ಇವರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ರಾಣೆಬೆನ್ನೂರು ಇದರ ಮಾರುಕಟ್ಟೆ ಕ್ಷೇತ್ರದಲ್ಲಿ ಅಧಿಸೂಚಿಸಲ್ಪಟ್ಟ ಕೃಷಿ ಉತ್ಪನ್ನಗಳ ನಿಯಂತ್ರಿತ ಮಾರಾಟಕ್ಕಾಗಿ ರಾಣೆಬೆನ್ನೂರು ಪಟ್ಟಣದ ನೆಹರು ಮಾರುಕಟ್ಟೆ ಎಂದು ಕರೆಯಲ್ಪಡುತ್ತಿರುವ ಈ ಕೆಳಕಂಡ ಅನುಸೂಚಿ-ಎ ನಲ್ಲಿ ನಿರ್ದಿಷ್ಟಪಡಿಸಿದ ಸ್ಥಳವನ್ನು "ಮಾರುಕಟ್ಟೆ ಉಪ ಪ್ರಾಂಗಣ" ವೆಂದು ಘೋಷಿಸಿದ್ದರು.

ಈಗ ರಾಣೆಬೆನ್ನೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಮಾರುಕಟ್ಟೆ ಕ್ಷೇತ್ರದಲ್ಲಿ ಅಧಿಸೂಚಿಸಲ್ಪಟ್ಟಿರುವ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಸದರಿ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ಈ ಕೆಳಗಿನ ಅನುಸೂಚಿ-ಎ ನಲ್ಲಿ ತಿಳಿಸಿರುವ ಮಾರುಕಟ್ಟೆ ಉಪ ಪ್ರಾಂಗಣವನ್ನು ಅಪವರ್ಜಿಸಲು ಉದ್ದೇಶಿಸಲಾಗಿದೆ.

ಆದುದರಿಂದ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ ಪ್ರಕರಣ 3ನ್ನು ಓದಿ ಪ್ರಕರಣ 6(3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕದಲ್ಲಿ ಕೃಷಿ ಮಾರಾಟ ನಿರ್ದೇಶಕನಾಗಿರುವ ಸೈಯದ್ ಜಮೀರ್ ಪಾಷಾ ಆದ ನಾನು, ರಾಣೆಬೆನ್ನೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರದಲ್ಲಿ ಸರ್ಕಾರದ ಅಧಿಸೂಚನೆಗಳ ಮೂಲಕ ಕಾಲಕಾಲಕ್ಕೆ ಘೋಷಿಸಲಾದ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಈ ಕೆಳಗಿನ ಅನುಸೂಚಿ - ಬಿ ನಲ್ಲಿ ನಿರ್ದಿಷ್ಟಪಡಿಸಿದ ಸ್ಥಳವನ್ನು "ಮಾರುಕಟ್ಟೆ ಉಪ ಪ್ರಾಂಗಣ" ವೆಂದು ಘೋಷಿಸಲು ಉದ್ದೇಶಿಸಿದ್ದೇನೆ;

**ಅನುಸೂಚಿ-ಎ**

| | | |
|---|---|---|
| ಪೂರ್ವಕ್ಕೆ | : | ಗಾಂಧಿ ಮೈದಾನ ರಸ್ತೆ |
| ಪಶ್ಚಿಮಕ್ಕೆ | : | ಮೌನೇಶ್ವರ ದೇವಸ್ಥಾನ ರಸ್ತೆ |
| ಉತ್ತರಕ್ಕೆ | : | ಮಹಾತ್ಮಗಾಂಧಿ ರಸ್ತೆ |
| ದಕ್ಷಿಣಕ್ಕೆ | : | ರಾಷ್ಟ್ರೀಯ ಹೆದ್ದಾರಿ ರಸ್ತೆ |

**ಅನುಸೂಚಿ-ಬಿ**

| | | |
|---|---|---|
| ಪೂರ್ವಕ್ಕೆ | : | ಸರ್ವೆ ನಂ. 349:1 |
| ಪಶ್ಚಿಮಕ್ಕೆ | : | ಸರ್ವೆ ನಂ. 350 |
| ಉತ್ತರಕ್ಕೆ | : | ಸರ್ವೆ ನಂ. 348 |
| ದಕ್ಷಿಣಕ್ಕೆ | : | ರಾಷ್ಟ್ರೀಯ ಹೆದ್ದಾರಿ ಸಂಖ್ಯೆ 4 |

ಮೇಲಿನ ಪ್ರಸ್ತಾವಕ್ಕೆ ಸಂಬಂಧಿಸಿದಂತೆ, ಯಾವುದೇ ಆಕ್ಷೇಪಣೆಗಳು ಮತ್ತು ಸಲಹೆಗಳು ಇದ್ದಲ್ಲಿ ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 32 ದಿವಸಗಳೊಳಗಾಗಿ ತಲುಪುವಂತೆ ಕಳುಹಿಸಿಕೊಟ್ಟಲ್ಲಿ ಪರಿಶೀಲಿಸಲಾಗುವುದು. ಆಕ್ಷೇಪಣೆ ಮತ್ತು ಸಲಹೆಗಳನ್ನು ಕೃಷಿ ಮಾರಾಟ ನಿರ್ದೇಶಕರು, ನಂ.16, 2ನೇ ರಾಜಭವನ ರಸ್ತೆ, ಬೆಂಗಳೂರು-01 ಇವರ ವಿಳಾಸಕ್ಕೆ ಕಳುಹಿಸಲು ಸೂಚಿಸಲಾಗಿದೆ.

**ಸೈಯದ್ ಜಮೀರ್ ಪಾಷಾ**
ಪಿ.ಆರ್. 881 ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು.

**PROCEEDINGS OF THE REGISTERING AUTHORITY AND REGIONAL TRANSPORT OFFICER:INDIRANAGAR:BANGALORE(EAST):BANGALORE-38.**

**Present:-** Afzal Ahmed Khan,
Regional Transport Officer & Registering Authority,
Indiranagar, Bangalore (East).

**Sub:-** Cancellation of registration certificate in respect of M.V.No. TN-59-C-1544-Reg.

**Ref:-** 1. Application Dated 01-01-2004 for surrender documents.
2. Application dated: 7-4-2004 for r/o

**PREAMBLE:-**

The registered owner of the M.V. TN-59-c-1544 Stage Carriage in the name of Sri Abdul Majored, S/o Abdul Khader, No. 2, Mosque Building, Bus Stand, Hoskote, Bangalore Dist. Has surrender the documents of stage carriage under reference (1) sub-sequently the registered owner in his letter dated 7-04-2004 has requested to cancel the registration certificate under surrender condition. Since the M.V. is not road worthy and also IMV of this office who has inspected the said vehicle has recommended for the cancellation of registration certificate.

In view of the above facts I pass the:

**ORDER**

**No. RTO.BNG.E.RGN/TR.PR./TN-59-C-1544/04-05, Dated: 2nd June 2004**

In exercise of the powers vested under Sec.55(1) of the Motor Vehicle Act, 1988, I Afzal Ahmed Khan, Registering Authority & Regional Transport Officer, Bangalore (East) do hereby cancel the registration & Registration Certificate of the TN-59-C-1544 Stage carriage w.e.f. 02-06-2004 as desired by the R/O under on-use condition without prejudice and subject to recover the arrears of tax or penalty due if any found later on, and also register owner should abed the decision of the appeal pending before the DCT, Bangalore-regarding payment of tax for the period from 1-12-2003 to 31-12-2003.

The brief description of the M.V. is as follows:-

| | | |
|---|---|---|
| 1. | M.V. No. | TN-59-C-1544 |
| 2. | Class of Vehicle | Stage Carriage |
| 3. | Type of Body | Semi saloon |
| 4. | Chassis No. | Nue-273870 |
| 5. | Engine No. | Nue-154125 |
| 6. | Year of Manufacture | 1992 |

**AFZAL AHMED KHAN**
P.R. 882 Regional Transport Officer & Registering Authority, Indiranagar, Bangalore (East)

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಅಡಿ ಆಯುಕ್ತರು, ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ:ಕಾಅಗ:ಕಾನಪ:14/04/199 ದಿನಾಂಕ:27ನೇ ಮೇ 2004**

ಅರ್ಜಿದಾರರು

1. ಶ್ರೀ ಮರಿಯಪ್ಪ S/o ಹನುಮಪ್ಪ ದಿವಾನದ
2. ಶ್ರೀಮತಿ ಹನಮವ್ವ W/o ಮರಿಯಪ್ಪ ದಿವಾನದ
3. ಶ್ರೀಮತಿ ಹೊನ್ನವ್ವ W/o ಅಡಿವೆಪ್ಪ @ ಮುದಿಯಪ್ಪ ದಿವಾನದ
4. ಕುಮಾರಿ ನಾಗಮ್ಮ D/o ಅಡಿವೆಪ್ಪ @ ಮುದಿಯಪ್ಪ ದಿವಾನದ ಎಲ್ಲರೂ ವಾಸ, ಗಜೇಂದ್ರಗಡ; ರೋಣ ತಾಲ್ಲೂಕು.

ವಿರುದ್ಧ ಪ್ರತಿವಾದಿಗಳು

1. ಶಿವಪ್ಪ S/o ಶೇಖರಪ್ಪ ಸಂಗನಾಳ್, ಟ್ರಾನ್ಸ್‌ಪೋರ್ಟ್ ಬಿಸಿನೆಸ್, ಗಜೇಂದ್ರಗಡ; ಕುಂಬಾರ ಓಣಿ ರೋಣ ತಾ.
2. ದಿ ಮ್ಯಾನೇಜರ್, ನ್ಯೂ ಇಂಡಿಯಾ ಅಶೂರೆನ್ಸ್ ಕಂ.ಲಿ., ಗದಗ.

**ಪ್ರಕಟಣೆ**

ಅರ್ಜಿದಾರರಾದ ಶ್ರೀ ಮರಿಯಪ್ಪ ಮತ್ತು ಇತರೆ ಮೂವರು ಇವರು, ತಾವು ಮೃತ ಅಡಿವೆಪ್ಪ @ ಮುದಿಯಪ್ಪ ದಿವಾನದ ಇವರ ತಂದೆ ತಾಯಿ ಹೆಂಡತಿ ಮಗಳು ಮತ್ತು ಆಶ್ರಿತರು ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಅಡಿವೆಪ್ಪ @ ಮುದಿಯಪ್ಪ ದಿವಾನದ ಇವರು ಒಂದನೇ ಪ್ರತಿವಾದಿಗಳಾದ ಶಿವಪ್ಪ S/o ಶೇಖರಪ್ಪ ಸಂಗನಾಳ್ ಇವರಲ್ಲಿ ಹಮಾಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ದ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಪಿ.ಆರ್. 883 ಕಾರ್ಮಿಕ ಅಧಿಕಾರಿ, ಗದಗ ಜಿಲ್ಲೆ, ಗದಗ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರ.ಸಂ.ಕಾಅದಾ:ಕಾನಪ:ಸಿಆರ್-122/04 ದಿನಾಂಕ: 3ನೇ ಜೂನ್ 2004**

ಅರ್ಜಿದಾರರು

1. ರುಕ್ಮಿಣಿಯಮ್ಮ ಕೋಂ ಚಂದ್ರಪ್ಪ 45 ವರ್ಷ
2. ಚಂದ್ರಪ್ಪ ಬಿನ್ ಪರಶುರಾಮ್ 50 ವರ್ಷ
3. ಬಸಾಪುರ ರಸ್ತೆ, ಅಣ್ಣಾನಗರ, ದಾವಣಗೆರೆ.

ವಿರುದ್ಧ ಪ್ರತಿವಾದಿಗಳು

1. ರಮೇಶ್ ಮಲಾಡ್‌ಕರ್ ಬಿನ್ ದಿ।। ರಾಮಕೃಷ್ಣಮಲಾಡ್‌ಕರ್ ಕೇರಾಫ್ ಡಾ।। ಜಯಪ್ರಕಾಶ್ ನರ್ಸಿಂಗ್ ಹೋಂ ಚೇತನಾ ಹೋಟೆಲ್ ಎದುರು, ದಾವಣಗೆರೆ.
2. ಚೀಫ್ ಇಂಜಿನಿಯರ್, ಬೆಸ್ಕಾಂ (ಕೆಪಿಟಿಸಿಎಲ್) ಸಿಟಿ ಸಬ್ ಡಿವಿಜನ್ ನಂ-1, ಕೆ.ಇ.ಬಿ. ಸರ್ಕಲ್, ದಾವಣಗೆರೆ.

**ಪ್ರಕಟಣೆ**

ಶ್ರೀಮತಿ ರುಕ್ಮಿಣಿಯಮ್ಮ ಮತ್ತು ಚಂದ್ರಪ್ಪ ಇವರುಗಳಾದ ತಾವು ಮೃತ ಸುಬ್ರಮಣ್ಯ ಇವರ ತಾಯಿ ಮತ್ತು ತಂದೆ ಎಂದೂ, ಅವರ ಸಾವಿಗಾಗಿ ನಷ್ಠ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಸುಬ್ರಮಣ್ಯ ರವರು ಒಂದನೇ ಪ್ರತಿವಾದಿಗಳಾದ ರಮೇಶ್ ಮಲಾಡ್‌ಕರ್ ಇವರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಪಿ.ಆರ್. 885 ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಠ ಪರಿಹಾರ ದಾವಣಗೆರೆ ಜಿಲ್ಲೆ, ದಾವಣಗೆರೆ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರ.ಸಂ.ಕಾಅದಾ:ಕಾನಪ:ಸಿಆರ್-166/04 ದಿನಾಂಕ: 1ನೇ ಜೂನ್ 2004**

ಅರ್ಜಿದಾರರು

1. ಪವಿತ್ರ 18 ವರ್ಷ, (2) ಶಾಂತಮ್ಮ 16 ವರ್ಷ
3. ಲಕ್ಷ್ಮಪ್ಪ 15 ವರ್ಷ, (4) ಮಮತಾ 14 ವರ್ಷ (ದೇವೇಂದ್ರಪ್ಪನವರ ಮಕ್ಕಳು)
5. ದುಗಮ್ಮ 65 ವರ್ಷ, ಬಾನುವಳ್ಳಿ ಹರಿಹರ ತಾಲ್ಲೂಕು, ದಾವಣಗೆರೆ ಜಿಲ್ಲೆ.

ವಿರುದ್ಧ ಪ್ರತಿವಾದಿಗಳು

1. ಬಿ. ಸೀತಾರಾಮರೆಡ್ಡಿ ಬಿನ್ ಭೀಮರೆಡ್ಡಿ ಬಳಸನೂರು, ಹರಿಹರ ತಾಲ್ಲೂಕ್.
2. ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ., ಡಿವಿಜನಲ್ ಆಫೀಸ್ ತರಕಾರಿ ಮಾರುಕಟ್ಟೆ ಸಮೀಪ ದಾವಣಗೆರೆ.

**ಪ್ರಕಟಣೆ**

(1) ಕು॥ ಪವಿತ್ರ (2) ಶಾಂತಮ್ಮ (3) ಲಕ್ಷ್ಮಪ್ಪ (4) ಮಮತಾ (5) ದುಗಮ್ಮ ಇವರುಗಳಾದ ತಾವು ಮೃತ ದೇವೇಂದ್ರಪ್ಪ ಇವರ ಮಕ್ಕಳು ಮತ್ತು ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ದೇವೇಂದ್ರಪ್ಪ ರವರು ಒಂದನೇ ಪ್ರತಿವಾದಿಗಳಾದ ಬಿ. ಸೀತಾರಾಮರೆಡ್ಡಿ ಇವರ ಟ್ರ್ಯಾಕ್ಟರ್ ರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಪಿ.ಆರ್. 886 ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು, ಕಾರ್ಮಿಕ ನಷ್ಟ ಪರಿಹಾರ ದಾವಣಗೆರೆ ಜಿಲ್ಲೆ, ದಾವಣಗೆರೆ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರ.ಸಂ.ಕಾಅದಾ:ಕಾನಪ:ಸಿಆರ್-118/04 ದಿನಾಂಕ: 1ನೇ ಜೂನ್ 2004**

**ಅರ್ಜಿದಾರರು**

1. ಸಾಮ್ಲದೇವಿ ಕೋಂ ದಿ॥ ದುರುಪದೇವ್‌ಪಾಲ್ @ ದುರ್ಗಾದೇವ್, 32 ವರ್ಷ
2. ರಾಮ್‌ರಿಚ್‌ಪಾಲ್ 60 ವರ್ಷ
3. ಕಮಲೇಶ್ 18 ವರ್ಷ, (4) ಸಿಂಗಾರೆದೇವಿ, 58 ವರ್ಷ
5. ದುರುಗೇಶ್ 16 ವರ್ಷ, (6) ಮಿತಲೇಶ್ 14 ವರ್ಷ
7. ಅಮೀತ್ 6 ವರ್ಷ, (8) ಮಾನೀಶ್ 2 ವರ್ಷ,- ಪರ್ಗಸಾನ್ ಗ್ರಾಮ, ಭವಾನಿಚಬ್ಬರ್ ಬಜಾರ್ ಅಂಚೆ, ಭಟ್ ಪರ್ನಿತಸಿಲ್, ದೇವಾರಿಯಾ ಜಿಲ್ಲೆ ಉತ್ತರ ಪ್ರದೇಶ.

**ವಿರುದ್ಧ ಪ್ರತಿವಾದಿಗಳು**

1. ಶ್ರೀನಿವಾಸ್, ಸ್ಟೆಟ್ ಇನ್‌ಛಾರ್ಜ್ ಇಂಜಿನಿಯರ್, ಆರ್‌ಕೆಎಸ್ ಇಂಜಿನಿಯರ್ಸ್ ಪ್ರೈ ಲಿ., ಕೇರಾಫ್ ದಾವಣಗೆರೆ ಷುಗರ್ ಕಂ. ಲಿ., ಕುಕ್ಕವಾಡ, ದಾವಣಗೆರೆ ತಾಲ್ಲೂಕು.
2. ಡಿವಿಜನಲ್ ಮ್ಯಾನೇಜರ್, ನ್ಯೂ ಇಂಡಿಯಾ ಆಶ್ಯೂರೆನ್ಸ್ ಕಂ. ಲಿ., ಚಾಮರಾಜಪೇಟೆ ದಾವಣಗೆರೆ.

**ಪ್ರಕಟಣೆ**

ಶ್ರೀಮತಿ ಸಾಮ್ಲದೇವಿ ಮತ್ತಿತರೆ 7 ಜನರು ತಾವು ಮೃತ ದುರುಪದೇವ್‌ಪಾಲ್ @ ದುರ್ಗಾದೇವ್ ಇವರ ಪತ್ನಿ, ತಂದೆ ಮತ್ತು ತಾಯಿ ಹಾಗೂ ಮಕ್ಕಳುಗಳು ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ದುರುಪದೇವ್ ಪಾಲ್ @ ದುರ್ಗಾದೇವ್ ರವರು ಒಂದನೇ ಪ್ರತಿವಾದಿಗಳಾದ ದಾವಣಗೆರೆ ಷುಗರ್ ಕಂಪನಿ ಲಿ. ಇವರ ಕಂಪನಿ ರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಪಿ.ಆರ್. 887 ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು, ಕಾರ್ಮಿಕ ನಷ್ಟ ಪರಿಹಾರ, ದಾವಣಗೆರೆ ಜಿಲ್ಲೆ, ದಾವಣಗೆರೆ.

**IN THE COURT OF COMMISSIONER FOR WORKMEN'S COMPENSATION, BIDAR**

**No: LOB/WCA/Cr-28/2004**

**APPLICANTS:**

1. Subhash S/o Dhondiba Age 45 Years Occ: Labour, R/o Kodambal Tq. Humnabad, Dist Bidar and one other.

**V/S**

**RESPONDENT**

1. Sri Ram Gopal S/o Kanaiah Set, Jai Hanuman Sugar Factory, Kodambal Tq Humnabad.
2. Basappa S/o Rukkanna Manager Jai Hanuman Sugar Factory, Kodambal Tq Humnabad.

**PROCLAIMATION**

Sri Subhash F/o Vijubai @ Vijay Laxmi R/o Kodambal Tq Humnabad Dist Bidar have/has filed application in this court claiming compensation stating that Late: Viju Bai @ Vijay Laxmi was working as Labour under the Respondent he met with an accident arising out of and during the course of employment as a result he died on:13.12.2001.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclamation, if no applications or objections are received within the specified date the court will proceeded further in the matter.

P.R. 890 Commissioner for Workmen's Compensation, Bidar.

**DIRECTORATE OF ECONOMICS AND STATISTICS,**
**GOVERNMENT OF KARNATAKA, BANGALORE-1.**
**Consumer Price Index Numbers for Industrial Workers**

**No.DES 24 PWX 2004** **Month: MARCH 2004**
**State: Karnataka** **Base: 1987-88=100** **Date: 2-06-2004**

| | Group/Sub-Group | Bellary | Bhadra-vathi | Davan-gere | Dan-deli | Gulbar-ga | Hari-har | Has-san | Man-dya | Man-galore | My-sore | Rai-chur | Tum-kur |
|---|---|---|---|---|---|---|---|---|---|---|---|---|---|
| I. | **FOOD:** | | | | | | | | | | | | |
| | (a) Cereals & Products | 301 | 409 | 374 | 349 | 323 | 347 | 356 | 303 | 269 | 379 | 310 | 356 |
| | (b) Pulses & Products | 264 | 294 | 296 | 337 | 299 | 284 | 299 | 300 | 272 | 293 | 297 | 307 |
| | (c) Oils & Fats | 263 | 260 | 255 | 266 | 287 | 260 | 285 | 302 | 265 | 276 | 259 | 258 |
| | (d) Meat, Fish & Eggs | 334 | 314 | 365 | 454 | 325 | 339 | 287 | 343 | 522 | 357 | 387 | 331 |
| | (e) Milk & Products | 342 | 226 | 307 | 313 | 299 | 267 | 251 | 341 | 289 | 257 | 307 | 281 |
| | (f) Condiments & Spices | 227 | 319 | 347 | 412 | 310 | 294 | 279 | 246 | 233 | 296 | 275 | 319 |
| | (g) Vegetables & Fruits | 219 | 275 | 265 | 319 | 249 | 226 | 264 | 220 | 186 | 251 | 198 | 452 |
| | (h) Other Food | 258 | 351 | 332 | 339 | 276 | 291 | 289 | 277 | 309 | 281 | 296 | 318 |
| | **FOOD GROUP** | 284 | 333 | 334 | 345 | 301 | 301 | 304 | 300 | 313 | 310 | 300 | 333 |
| II | Pan, Supari, Tobacco & Intoxicants | 304 | 357 | 370 | 320 | 388 | 422 | 359 | 467 | 294 | 331 | 352 | 384 |
| III | Fuel & Light | 296 | 308 | 277 | 430 | 278 | 314 | 344 | 329 | 270 | 298 | 363 | 291 |
| IV | Housing | 100 | 100 | 100 | 100 | 100 | 100 | 100 | 100 | 100 | 100 | 100 | 100 |
| V | Clothing, Bedding & Footwear | 255 | 253 | 226 | 373 | 292 | 248 | 323 | 381 | 241 | 291 | 402 | 208 |
| VI | **Miscellaneous:** | | | | | | | | | | | | |
| | (a) Medical Care | 566 | 466 | 370 | 278 | 288 | 262 | 387 | 332 | 336 | 295 | 394 | 219 |
| | (b) Education, Recreation & Amusement | 336 | 311 | 521 | 204 | 388 | 385 | 322 | 319 | 328 | 421 | 370 | 368 |
| | (c) Transport & Communication | 348 | 386 | 327 | 333 | 595 | 344 | 347 | 558 | 347 | 408 | 388 | 362 |
| | (d) Personal Care & effects | 260 | 269 | 263 | 281 | 296 | 252 | 272 | 296 | 257 | 317 | 258 | 268 |
| | (e) Others | 320 | 339 | 282 | 422 | 288 | 269 | 283 | 282 | 238 | 297 | 402 | 246 |
| | Miscellaneous Group Index | 359 | 327 | 336 | 302 | 343 | 295 | 312 | 314 | 290 | 353 | 351 | 282 |
| | **GENERAL INDEX** | **274** | **297** | **293** | **322** | **283** | **273** | **289** | **294** | **279** | **283** | **303** | **270** |
| | To convert to Base 1960 Multiply by Linking Factor. | 7.39 | 9.19 | 8.27 | .... | 8.26 | 8.56 | 9.25 | 7.92 | 9.31 | 9.05 | .... | .... |

For Director,
Joint Director,
Directorate of Economics And Statistics, Bangalore

**GOVERNMENT OF INDIA**
**MINISTRY OF LABOUR**
**LABOUR BUREAU**
**No. 112/1 (KTK) /2001-FIS**

'Cleremount' Shimla-171004
Dated :6TH MAY 2004

**CONSUMER PRICE INDEX NUMBERS FOR INDUSTRIAL WORKERS**
**(Base: 1982=100)**

**State: KARNATAKA** **Month: MARCH 2004**

| Code | | Group/Sub-group/ Centre | Bangalore | Belgaum | Hubli-Dharwad | Mercara |
|---|---|---|---|---|---|---|
| 1000 | IA. | **FOOD:** | | | | |
| 1100 | | (a) Cereals & Products | 437 | 546 | 454 | 456 |
| 1200 | | (b) Pulses & Products | 537 | 514 | 532 | 576 |
| 1300 | | (c) Oils & Fats | 422 | 394 | 395 | 437 |
| 1400 | | (d) Meat, Fish & Eggs | 596 | 557 | 543 | 551 |
| 1500 | | (e) Milk & Products | 375 | 531 | 440 | 447 |
| 1600 | | (f) Condiments & Spices | 508 | 626 | 608 | 492 |
| 1700 | | (g) Vegetables & Fruits | 426 | 432 | 516 | 436 |
| 1800 | IA. | (h) Other Food | 692 | 704 | 633 | 682 |
| 1000 | | **FOOD GROUP** | 500 | 557 | 507 | 510 |
| 2000 | IB. | Pan, Supari, Tobacco & Intoxicants | 665 | 626 | 624 | 519 |
| 3000 | II. | Fuel & Light | 720 | 632 | 550 | 441 |
| 4000 | III. | Housing Index | 551 | 664 | 496 | 195 |
| 5000 | IV. | Clothing, Bedding & Footwear | 270 | 262 | 311 | 404 |
| 6000 | V. | Miscellaneous: | | | | |
| 6100 | | (a) Medical Care | 484 | 513 | 467 | 420 |
| 6200 | | (b) Education, Recreation & Amusement | 421 | 721 | 581 | 638 |
| 6300 | | (c) Transport & Communication | 575 | 449 | 576 | 628 |
| 6400 | | (d) Personal Care & effects | 494 | 434 | 489 | 446 |
| 6500 | | (e) Others | 481 | 563 | 443 | 470 |
| 6600 | | Miscellaneous Group | 488 | 524 | 498 | 499 |
| | | **GENERAL INDEX** | **490** | **552** | **501** | **477** |

For Director,
P.R. 891 Joint Director, Directorate of Economics and Statistics, Bangalore.